# ಕೊಡಗು  ಸಂಗಾತಿ


ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K·R·N·N· 240 ಸಂಪುಟ : 2 ಸಂಚಿಕೆ :4 ಫೆಬ್ರವರಿ 15 ರಿಂದ 28–1998 ಪುಟಗಳು : 24 ರೂ. 5


ಶಿವ ಶಿವ ಎಂದರೆ ಭಯವಿಲ್ಲಾ, ಶಿವನೊಲಿದರೆ ಯಾರಿಗೂ ಭಯವಿಲ್ಲಾ.

ಜನಾಂಗದ ಸರ್ವರಿಗೂ ಶಿವರಾತ್ರಿ ಹಬ್ಬದ ಶುಭಾಶಯಗಳು

**ಕೊಡಗು ಸಂಗಾತಿ**

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**
ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**
ಸಹ ಸಂಪಾದಕ :
**ಹುಲಿಮನೆ ರಮೇಶ್**
ವರದಿಗಾರ :
**ಪಟ್ಟಡ ಎಲ್. ಶಿವಕುಮಾರ್**
ಕಾರ್ಯ ನಿರ್ವಾಹಕಿ :
**ಕು|| ಗೀತಾ ಮೋಂಟಡ್ಕ**
ಪತ್ರಿಕಾ ಪ್ರತಿನಿಧಿ :
**ಕು|| ಧನು ಚೆರಿಯಮನೆ**
ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**
**ಮುಣ್ಣಾಪುರ ಧರಣಿ ಗಣಪತಿ**
ಮುದ್ರಕರು :
**ಮುಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ್**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
**ನಂ. 35, "ಸವಿತಾ ನಿಲಯ"**
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, **ಮೈಸೂರು-12.**
ಫೋನ್ : **516771**

# ಒಳನೋಟ

ಪುಟಗಳು



## ಅರೆ ಭಾಷೆಕ ವಿಭಾಗ



**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :

### ಇದು ಯಾರ ತಪ್ಪು ?

ಬ್ರಿಟೀಷರು ಭಾರತದಿಂದ ಹೋಗಿ 50 ವರ್ಷ ಕಳೆಯಿತು. ಬ್ರಿಟೀಷರು ಇದ್ದಾಗ ಅವರ ಗುಲಾಮರಾಗಿದ್ದೆವು. ರಾಜಕೀಯವಾಗಿ ನಾವು ಸ್ವಾತಂತ್ರ್ಯಗಳಿಸಿದರು ಮಾನಸಿಕವಾಗಿ, ಸಾಂಸ್ಕೃತಿಕವಾಗಿ ನಾವು ಇಂದಿಗೂ ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆಯಿಂದ ವಿಮುಕ್ತರಾಗಗಲಿಲ್ಲ. ನಮ್ಮ ಮಕ್ಕಳಿಗೆ ಅಮ್ಮ ಅಪ್ಪ ಎಂಬುದಾಗಿ ಕರೆಯುವುದನ್ನು ಕಲಿಸುವುದನ್ನು ಬಿಟ್ಟು "ಡ್ಯಾಡಿ" "ಮಮ್ಮಿ" "ಪಪ್ಪ" "ಮಮ್ಮ" ಶಬ್ದಗಳನ್ನೇ ಕಲಿಸುತ್ತಿದ್ದೇವೆ. ನಂತರ ಗಂಡಸಿಗೆ "ಅಂಕಲ್" ಹೆಂಗಸಿಗೆ "ಆಂಟಿ" ಎಂಬುದಾಗಿ ಸಂಭೋಧಿಸುವುದಕ್ಕೆ ದೊಡ್ಡವರೇ ಹೇಳಿ ಕೊಡುತ್ತಾರೆ. "ಡ್ಯಾಡಿ" "ಮಮ್ಮಿ" ಗಿಂತ "ಅಮ್ಮ ಅಪ್ಪ" ಎನ್ನುವುದು ಚಿಕ್ಕಪ್ಪ, ಚಿಕ್ಕಮ್ಮ, ದೊಡ್ಡಪ್ಪ, ದೊಡ್ಡಮ್ಮ, ಎನ್ನುವುದು ಕಡಿಮೆತರವೆಂಬ ಭಾವನೆ ಇರುವುದೇ ಇದಕ್ಕೆ ಕಾರಣವಾಗಿದೆ. ಇನ್ನು ಹುಟ್ಟುವ ಮಕ್ಕಳಿಗೆ ದೊಡ್ಡಪ್ಪ ಎಂದರೆ ತನ್ನ ಅಪ್ಪನ ಅಣ್ಣ, ದೊಡ್ಡಮ್ಮ ಅಂದರೆ ತನ್ನ ದೊಡ್ಡಪ್ಪನ ಹೆಂಡತಿ. ಚಿಕ್ಕಮ್ಮ ಎಂದರೆ ತನ್ನ ಚಿಕ್ಕ ತಂದೆಯ ಹೆಂಡತಿ ಎಂಬ ಬೇಧವೇ ಗೊತ್ತಿಲ್ಲದಾಗಿದೆ. ದೊಡ್ಡಪ್ಪನೂ ಅಂಕಲ್, ಸೋದರಮಾವನೂ ಅಂಕಲ್ ಆಗಿ ಹೋಗಿದ್ದಾರೆ. ಚಿಕ್ಕ ತಂದೆಯ ಮಗನೂ ದೊಡ್ಡ ತಂದೆಯ ಮಗನೂ "ಕಸಿನ್" ಸೋದರಮಾವನ ಮಗನೂ ಕಸಿನ್ ಆಗಿ ಮಗುವಿಗೆ ತನ್ನ ಸಂಬಂಧಿಕರ ಗುರುತೇ ಇಲ್ಲದಾಗಿದೆ.

ಇದರೊಡನೆ ಒಬ್ಬರನ್ನೊಬ್ಬರು ಕಂಡಾಗ ಹೇಳುವ ನಮಸ್ಕಾರ, ಕಾಲು ಹಿಡಿಯುವುದು ಮರತೇ ಹೋಗಿದೆ. "ಹಾಯ್" ಎಂದರೆ, ನಮಸ್ಕಾರ ಮಾಡುವುದು ಕಾಲು ಹಿಡಿಯುವುದು, ಕಷ್ಟ ಸುಖ ವಿಚಾರಿಸುವುದು ಎಲ್ಲಾ ಸಂಭಾಷಣೆಗಳು "ಹಾಯ್" ಎಂಬ ಒಂದು ಪದದಲ್ಲಿ ಅಡಕವಾಗಿ ಹೋಯಿತು. ಅದೇ ರೀತಿ ಒಬ್ಬರನ್ನೊಬ್ಬರು ಬೀಳ್ಕೊಡುವಾಗ "ಬೈಬೈ" ಎಂದರೆ, ನಾನು ಹೋಗಿ ಬರುತ್ತೇನೆ, ನಮಸ್ಕಾರ, ಕಾಲು ಮುಟ್ಟಿ ನಮಸ್ಕರಿಸುವುದು ಎಲ್ಲಾ ಸೇರಿ ಹೋಗಿದೆ. ಇನ್ನೂ ಹತ್ತು ವರ್ಷ ಕಳೆದರೆ ಇವೆಲ್ಲಾ ಬರೆ ಕೈಸನ್ನೆ ಮತ್ತು ಕಣ್ಣುಸನ್ನೆಗಳಿಗೆ ತಿರುಗಿ ಮನುಷ್ಯ–ಮನುಷ್ಯನ ಸಂಬಂಧವೇ ಇಲ್ಲವೇನೊ ಎಂಬ ಪರಿಸ್ಥಿತಿಗೆ ತಲುಪಬಹುದೇನೋ ಪಾಶ್ಚಾತ್ಯರ ಒಳ್ಳೆಯ ಗುಣಗಳಾದ ಶಿಸ್ತು, ಪ್ರಮಾಣಿಕತೆಯನ್ನು ನಾವು ಮರೆತಿದ್ದೇವೆ. ಅದರ ಬದಲು ಅವರ ಉಡುಗೆ ತೊಡುಗೆ ಅವರ ಕೆಟ್ಟ ಹವ್ಯಾಸಗಳಾದ, ಕುಡಿತ ಮಾತಿನ ರೀತಿಗಳನ್ನುಅನುಕರಣೆ ಮಾಡಿ ನಮ್ಮಲ್ಲಿದ್ದ ಸೌಮ್ಯ, ಆದರದ ಪ್ರೀತಿಯ ಶಾಂತಿಯುತ ಸರಳ ಜೀವನದ ಹಾದಿಯನ್ನುಬಿಟ್ಟು ನಾವೂ ಪಾಶ್ಚಾತ್ಯರಾಗುತ್ತಿದ್ದೇವೆ, ನಮ್ಮ ಸಂಸ್ಕೃತಿಯನ್ನು ಮರೆಯುತ್ತಿದ್ದೇವೆ. ನಮ್ಮ ಮಕ್ಕಳಿಗೂ ಕಲಿಸುತ್ತಿದ್ದೇವೆ. ಪರಿಸ್ಥಿತಿ ಹಾಗಿರುವಾಗ ಹಿರಿಯರು ಕಿರಿಯರಿಗೆ ತೋರಿಸಿ ಕೊಡುವ ದಾರಿಯಾದರೂ ಯಾವುದು ?

ನಮ್ಮ ಸಂಸ್ಕೃತಿ, ನಮ್ಮ ಸಂಸ್ಕೃತಿ ಎಂದು ಹೇಳುತ್ತಿರುವ ನಾವು ಇವುಗಳ ವಿಷಯದಲ್ಲಿ ಚಿಂತಿಸಿದ್ದೇವೆಯೇ ?

---

## ವಿಜ್ಞಾನ ಉಪಕರಣಗಳು

ಅನಿಮೊಮೀಟರ್ : ಗಾಳಿಯ ವೇಗವನ್ನು ಅಳೆಯುವ ಸಾಧನ.

ಪ್ಯಾಥೆಮೀಟರ್ : ಸಮುದ್ರದ ಆಳ ಅಳೆಯುವ ಮಾಪಕ.

ಸೆಸಿಮೊಗ್ರಾಫ್ : ಭೂಕಂಪದ ತೀವ್ರತೆ ಅಳೆಯುವ ಸಾಧನ.

ಲ್ಯಾಕ್ಟೋಮೀಟರ್ : ಹಾಲಿನಲ್ಲಿ ನೀರಿನ ಅಂಶ ಅಳೆಯುವ ಸಾಧನ.

ಗೀಗರ್ ಮುಲೆರ್ : ರೇಡಿಯೋ ವಿಕಿರಣ ಪತ್ತೆಹಚ್ಚುವ ಸಾಧನ

ಕಾರ್ಡಿಯೋಗ್ರಾಫ್ : ಹೃದಯದ ಬಡಿತವನ್ನು ರೆಕಾರ್ಡ್ ಮಾಡಿಕೊಳ್ಳುವ ಸಾಧನ.

ಮೆರಿನರ್ : ಹಡಗಿನಲ್ಲಿ ವಿಮಾನದ ದಿಕ್ಕು ತೋರಿಸುವ ಸಾಧನ

ರೇಡರ್ : ಹಾರಾಡುವ ವಿಮಾನದ ದಿಕ್ಕು ತೋರಿಸುವ ಸಾಧನ.

ರೈನ್‌ಗೇಜ್ : ಮಳೆ ಅಳೆಯುವ ಸಾಧನ.

ಆಡಿಯೋ ಮೀಟರ್ : ಶಬ್ಧದ ತೀವ್ರತೆಯನ್ನು ಅಳೆಯುವ ಸಾಧನ.

ಕೊಡಗು ಗೌಡರಲ್ಲಿ ಪ್ರಥಮ ಮಂತ್ರಿಯಾಗಿ, ಪ್ರಬುದ್ಧ ರಾಜಕಾರಣಿಯಾಗಿ ದುಡಿದ

# ದಂಬೆಕೋಡಿ ಅಪ್ಪಚ್ಚ ಚಿಣ್ಣಪ್ಪ

ತನ್ನ ವಿದ್ಯಾರ್ಥಿ ಜೀವನದಲ್ಲೇ ನಾಯಕ ಸ್ಥಾನಮಾನಗಳನ್ನು ಮೈಗೂಡಿಸಿಕೊಂಡು, ಆಟೋಟಗಳಲ್ಲೂ ಅಗ್ರಸ್ಥಾನವನ್ನು ಕಾಯ್ದುಕೊಂಡು, ಜನಸೇವೆಯಲ್ಲಿಯೂ ಪ್ರಥಮ ಸ್ಥಾನವನ್ನು ಅಲಂಕರಿಸಿದ, ಕಾಂಗ್ರೆಸ್ ಪಕ್ಷದ ನಾಯಕ, ಸಮಾಜ ಸೇವಕ, ಶಾಸಕರಾಗಿ, ಸಚಿವರಾಗಿ ಜನಸೇವೆಗೈದ ಕೊಡಗಿನ ಮನೆ ಮಾತಾಗಿ ರುವ ಹಿರಿಯ ರಾಜಕಾರಣಿಯೇ ದಂಬೆ ಕೋಡಿ ಅಪ್ಪಚ್ಚ ಚಿಣ್ಣಪ್ಪ.



ಚಿಣ್ಣಪ್ಪ ದಂಪತಿಗಳು

1929ರ ಅಕ್ಟೋಬರ್ 12ರಂದು, ಆಗ ಶಾಲಾ ಮಾಸ್ತರರಾಗಿ ಕೈ ಸಂಬಳಕ್ಕೆ ವಿದ್ಯಾದಾನಗೈಯುತ್ತಿದ್ದ ದಂಬೆಕೋಡಿ ಅಪ್ಪಚ್ಚನವರ ಮಗನಾಗಿ ಜನಿಸಿದ ಚಿಣ್ಣಪ್ಪ ನವರು ತಮ್ಮ 9ನೇ ವಯಸ್ಸಿನಲ್ಲಿ ಶಾಲೆಗೆ ಸೇರಿ ಮಡಿಕೇರಿಯಲ್ಲಿ ಎಸ್.ಎಸ್.ಎಲ್.ಸಿ ವರೆಗೆ ವಿದ್ಯಾಭ್ಯಾಸ ಪೂರೈಸಿದ ನಂತರ ಬೆಂಗಳೂರಿನಲ್ಲಿ ಬಿ.ಕಾಂ. ಪದವಿ ಪಡೆದು, ಕಾನೂನು ಪದವಿಯನ್ನೂ ಗಳಿಸಿಕೊಂಡ ನಂತರ ನಾಡಿನ ಏಳಿಗೆಗಾಗಿ ದುಡಿಯಲು ರಾಜಕೀಯ ಪ್ರವೇಶಿಸಿದರು. ಇವರನ್ನು ಕೊಡಗು ಸಂಗಾತಿಯು ಇತ್ತೀಚೆಗೆ ಸಂದ ರ್ಶಿಸಿದಾಗ ಅವರಾಡಿದ ಬಿಚ್ಚುನುಡಿಗಳನ್ನು ನಿಮ್ಮ ಮುಂದಿಡುತ್ತಿದ್ದೇನೆ.

**ಕೊಡಗು ಸಂಗಾತಿ** : ನೀವು ರಾಜಕೀಯ ಕ್ಕೆ ಹೇಗೆ ಪ್ರವೇಶಿಸಿದ್ದಿರಿ? ಅದರಲ್ಲಿ ಪ್ರಗತಿ ಹೇಗೆ ಕಂಡಿರಿ?

**ಉತ್ತರ** : ನಾನು 1960ರಲ್ಲಿ ಕಾನೂನು ಅಭ್ಯಾಸ ಮುಗಿಸಿ ನಾಡಿಗೆ ಹಿಂತಿರುಗಿದ ಮೇಲೆ 1961ರಲ್ಲಿ ತಾಲ್ಲೂಕು ಪಂಚಾ ಯತ್ ಸದಸ್ಯನಾದೆ, 1968 ರಿಂದ 1975ರ ವರೆಗೆ ತಾಲ್ಲೂಕು ಪಂಚಾಯತ್ ಅಧ್ಯಕ್ಷನಾದೆ. 1969ರಲ್ಲಿ ಕಾಂಗ್ರೆಸ್ ಒಡೆ ದಾಗ ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದು ಕೊಂಡೆ. 1983ರಲ್ಲಿ ಸ್ಪರ್ಧಿಸಲು ಟಿಕೇಟು ಸಿಗಲಿಲ್ಲ. 1985ರಲ್ಲಿಯೂ ಎಂ.ಎಲ್.ಸಿ. ಮಾಡುತ್ತೇವೆಂದರು. ಆದರೆ ಅದೃಷ್ಟವ ಶಾತಸೀಟು ಸಿಕ್ಕಿತು. ಆಗ ಅಜ್ಜಿಕುಟ್ಟೀರ ಸೋಮಯ್ಯನವರ ಪ್ರತಿಸ್ಪರ್ಧಿಯಾಗಿ ಗೆಲುವು ಸಾಧಿಸಿದೆ. ಆಗೊಂದು ವಿಶೇಷತೆ ಯೆಂದರೆ ಸಂಪಾಜೆ, ಭಾಗಮಂಡಲ–ಮಡಿ ಕೇರಿ ಸುತ್ತಲಿನ ಪ್ರದೇಶಗಳಲ್ಲಿ ನನಗೆ ಎರಡು ಸಾವಿರ ಮತಗಳು ಕಡಿಮೆ ಬಂದು ಸಿದ್ಧಾ ಪುರದ ಕಡೆಯ ಮತಗಳು ನನ್ನ ಗೆಲುವನ್ನು ನಿರ್ಧರಿಸಿದವು. 1987ರಲ್ಲಿ ಶಾಸಕಾಂಗ ಪಕ್ಷದ ಕಾರ್ಯದರ್ಶಿಯಾಗಿ ಕೆಲಸ ಮಾಡಿ ದ್ದೇನೆ. 1989ರಲ್ಲಿ ಮತ್ತೆ ಚುನಾವಣೆ ಯಲ್ಲಿ ಗೆಲುವು ಸಾಧಿಸಿದೆ. ವಿಧಾನಸಭೆ ಯಲ್ಲಿ ನಿಯೋಜಿತ ಸ್ಪೀಕರ್ ಆಗಿ ಎರಡು ವರ್ಷಗಳ ಕಾಲ ಕೆಲಸ ಮಾಡಿದೆ, ನಂತರ ಭೂ ಮತ್ತು ವಿಜ್ಞಾನ ಖಾತೆ ಸಚಿವನಾಗಿ ಜನಸೇವೆ ಮಾಡಿದ್ದೇನೆ.

● ಸಂದರ್ಶನ, ಲೇಖನ : ಶಿವಕುಮಾರ್

**ಕೊ. ಸ** : ಎರಡು ಬಾರಿ ಚುನಾವಣೆಯಲ್ಲಿ ಗೆದ್ದು ಮಂತ್ರಿಯಾದವರು, 1994ರ ಚುನಾವಣೆಯಲ್ಲಿ ನಿಮ್ಮ ಸೋಲಿಗೆ ಕಾರಣ ವೇನು ?

**ಉ** : 1994ರಲ್ಲಿ ನನ್ನ ಸೋಲಿಗೆ ನಮ್ಮ ಪಕ್ಷದವರೇ ಮುಖ್ಯಕಾರಣ. ನನಗೆ ಟಿಕೇಟು ಸಿಗಬಾರದೆಂದು ಬಹಳ ಜನ ಪ್ರಯತ್ನ ಪಟ್ಟರು.ಆಗ ನಾನು ಹಟದಿಂದಲೆ ಸೀಟನ್ನು ಗಿಟ್ಟಿಸಿಕೊಂಡೆ, ಜನಾರ್ಧನ ಪೂಜಾರಿಗೂ ನನಗೂ ವಿರೋಧವೂ ಇತ್ತು. ನಾನು ವಿದೇಶ ಕ್ಕೆ ಮೂರು ಬಾರಿ ಹಲವಾರು ಕರಾರು ಗಳನ್ನು ಮಾಡುವುದಕ್ಕಾಗಿ ಹೋಗಿದ್ದೆ, ಇದಕ್ಕೂ ಕೆಲವರು ದ್ವೇಷಿಸಿದರು. ಆಗ ನಾನು ಸೋಲುವುದು ಖಚಿತವಾಗಿತ್ತು. ಆಗ ನಾನು ಬಿ.ಜೆ.ಪಿ. ವಿರುದ್ಧ ಪ್ರಚಾರ ವನ್ನೂ ಕೈಗೊಳ್ಳಲಿಲ್ಲ.ಆಗ ಎಲ್ಲೆಡೆ ಬಿ.ಜೆ.ಪಿ ಅಲೆಯೂ ಇತ್ತು. ರಾಮ ಮಂದಿರ ಪ್ರಕ ರಣವೂ ಬಿ.ಜೆ.ಪಿ.ಗೆ ಲಾಭ ತಂದು ಅವರ ಗೆಲುವನ್ನು ಸುಲಭಗೊಳಿಸಿತು.

**ಕೊ. ಸ.** : ಕಾಂಗ್ರೆಸ್ ಇಂದು ಕ್ಷೀಣಿಸು ತ್ತಿರುವ ಪಕ್ಷದಂತೆ ಕಾಣಿಸುತ್ತಿದೆಯಲ್ಲವೇ?

**ಉ** : ಹಾಗೆ ಕಾಣುತ್ತಿರುವುದಕ್ಕೆ ನಾವೇ ಕಾರಣರು 1969 ರಲ್ಲಿ ಕಾಂಗ್ರೆಸ್ ವಿಭ ಜನೆಯಾದಾಗ ಇಂದಿರಾಗಾಂಧಿಯವರು ಕಮ್ಯುನಿಸ್ಟ್ ಪಾರ್ಟಿ, ಸೋಷಿಯಲಿಸ್ಟ್ ಪಾರ್ಟಿ, ಪ್ರಜಾ ಸೋಷಿಯಲಿಸ್ಟ್ ಪಾರ್ಟಿ ಗಳು ಸರ್ಕಾರದೊಡನೆ ಸೇರಿಕೊಂಡರು. ಬೇರೆ ಬೇರೆ ತತ್ವ ಸಿದ್ಧಾಂತಗಳನ್ನು ಒಳ ಗೊಂಡ ಇಂತಹ ನಾಯಕರ ಮಧ್ಯೆ ಅಂದಿ

ನಿಂದ ಇಂದಿನವರೆಗೂ ಭಿನ್ನಾಭಿಪ್ರಾಯ ಕಂಡುಬಂದಿದೆ. ಇನ್ನು ಕೆಲವರು ಎಂ.ಪಿ. ಸೀಟು ಸಿಕ್ಕಿಲ್ಲ, ಮಂತ್ರಿಗಿರಿ ಸಿಕ್ಕಿಲ್ಲ ಎಂದು ಹೊರಹೋಗುತ್ತಿದ್ದಾರೆ. ಎಲ್ಲರಿಗೂ ಈ ಸ್ಥಾನಗಳನ್ನು ಕೊಡಲು ಸಾಧ್ಯವೂ ಇಲ್ಲ ಎಂಬುದನ್ನು ಅವರು ಅರಿಯಬೇಕು. ಪಕ್ಷದಿಂದ ಪಡೆದ ಲಾಭವನ್ನು ಮರೆಯಬಾರದು. ಸೋನಿಯಾ ಗಾಂಧಿ ಬಂದ ಮೇಲೆ ಪಕ್ಷದ ವರ್ಚಸ್ಸು ಹೆಚ್ಚಿದೆ. ಕಳೆದ ಬಾರಿಗಿಂತ ಈ ಬಾರಿ ಕಾಂಗ್ರೆಸ್ ಹೆಚ್ಚು ಸ್ಥಾನಗಳನ್ನು ಪಡೆಯಲಿದೆ. ಆದರೂ ಬಹುಮತ ಪಡೆಯಲು ಸಾಧ್ಯವಾಗಲಿಕ್ಕಿಲ್ಲ. ಸಮ್ಮಿಶ್ರ ಸರ್ಕಾರವೇ ಭಾರತದ ಭವಿಷ್ಯವಾಗಿದೆ.

ಕೊ. ಸ. : 1996ರ ಚುನಾವಣೋತ್ತರ ಹೊಂದಾಣಿಕೆ ಸಮಂಜಸವಾಗಿದೆಯೇ ?

ಉ : ಬಿ.ಜೆ.ಪಿ. ಯನ್ನು ಅಧಿಕಾರದಿಂದ ಹೊರಗಿಡಬೇಕೆಂಬ ಉದ್ದೇಶದಿಂದ ಹೊಂದಾಣಿಕೆ ಅನಿವಾರ್ಯವಾಗಿತ್ತು. ಬಿ.ಜೆ.ಪಿ.ಯ ಆದರ್ಶಗಳಿಗೂ ನಮ್ಮ ಆದರ್ಶಗಳಿಗೂ ಬಹಳ ವ್ಯತ್ಯಾಸವಿದೆ ಅವರು ಜಾತೀಯತೆಯನ್ನು ಬೆಳೆಸುತ್ತಿದ್ದಾರೆ. ಆದರೆ ಈಗ ಜಾತ್ಯಾತೀತರು ಎಂದು ಹೇಳಿಕೊಂಡು ಬೇರೆ ಪಕ್ಷಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಿದ್ದಾರೆ.

ಕೊ. ಸ. : ನೀವು ಮಂತ್ರಿಯಾಗಿದ್ದಾಗ 'ಗೌಡ' ಜನಾಂಗಕ್ಕೆ ಏನೂ ಸಹಾಯ ಮಾಡಿಲ್ಲವೆನ್ನುವ ಅಪವಾದವಿದೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆಯೇನು ?

ಉ : ಅದು ಶುದ್ಧ ಸುಳ್ಳು, ಕೆಲವರು ನನ್ನ ಬಗ್ಗೆ ಆ ರೀತಿ ಆಗ ಅಪಪ್ರಚಾರ ಮಾಡಿದರು. ಆದರೆ ಈಗ ಎಲ್ಲಿ ಬೇಕಾದರೂ ಕೇಳಿ. ಮತ್ತೇ ನಾವು ಕಾನೂನು ಪ್ರಕಾರವೇ ಕೆಲಸ ಮಾಡಬೇಕಾಗುತ್ತದೆ. ವೈಯಕ್ತಿಕವಾಗಿ ಎಲ್ಲರಿಗೂ ಸಹಾಯ ಮಾಡಲು ಬರುವುದಿಲ್ಲ. ನನ್ನ ಕಾಲದಲ್ಲೇ ಸುಮಾರು 18 ಸೇತುವೆಗಳ ದುರಸ್ಥಿಗೆ ಹಣ ಬಿಡುಗಡೆಯಾಗಿತ್ತು. ಜೊತೆಗೆ ಹಲವಾರು ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದೇನೆ. ನಮ್ಮ ಸರಕಾರ ಅಲ್ಪಾವಧಿಯದಾಗಿದ್ದರಿಂದ ಅದಕ್ಕಿಂತ ಹೆಚ್ಚಿನ ಕೆಲಸಗಳನ್ನು ಮಾಡಲು ಸಾಧ್ಯವಾಗಲಿಲ್ಲ.

ಕೊ. ಸ. : ಕೊಡಗು ಪ್ರತ್ಯೇಕ ರಾಜ್ಯವಾಗಬಹುದೆ ?

ಉ : ಕೊಡಗು ಪ್ರತ್ಯೇಕ ರಾಜ್ಯ ಆಗಲು ಸಾಧ್ಯವೂ ಇಲ್ಲ, ಆಗಲೂ ಬಾರದು. ಆ ಉದ್ದೇಶದಿಂದಲೇ ನಾನು ಮಂತ್ರಿಯಾಗಿದ್ದಾಗ 'ಕೊಡಗು ಲಿವಾಕ್'ನ್ನು ಮಟ್ಟ ಹಾಕಿದೆ. ಕೊಡಗು ಪ್ರತ್ಯೇಕ ಗೊಂಡರೆ ಇಲ್ಲಿನ ಜನ ನರಳಬೇಕಾಗುತ್ತದೆ. ಇಲ್ಲಿ ಸೂಕ್ತ ಶೈಕ್ಷಣಿಕ ವ್ಯವಸ್ಥೆಯಿಲ್ಲ ಉದ್ಯೋಗಾವಕಾಶಗಳು ಇಲ್ಲ. ಹೊರರಾಜ್ಯಗಳಲ್ಲಿ ಎಲ್ಲಾ ರಂಗಗಳಲ್ಲೂ ಸೇರಿ ಶೇ 15ರಷ್ಟು ಮಾತ್ರ ಅವಕಾಶ ದೊರೆಯುತ್ತದೆ. ಕರ್ನಾಟಕದೊಡನೆ ವಿಲೀನವಾಗಿರುವುದರಿಂದ ಹಲವಾರು ಯೋಜನೆಗಳ ಸಹಕಾರ ಪಡೆಯಲು ಸಾಧ್ಯವಾಗಿದೆ. ಕೊಡಗಿನಲ್ಲಿ ನಾವು ಮೆಡಿಕಲ್ ಕಾಲೇಜು ಸ್ಥಾಪಿಸುತ್ತೇವೆಂದಾಗ ವಿರೋಧಿಸಿದರು. ಟೀ ಯೋಜನೆಯನ್ನು ಜಾರಿಗೆ ತಂದಾಗ ಆಗಲೂ ವಿರೋಧಿಸಿದರು. ಕ್ರೈಸ್ತರು ಇಂಜಿನಿಯರಿಂಗ್ ಕಾಲೇಜು ಸ್ಥಾಪಿಸುತ್ತೇವೆಂದಾಗ ಅದನ್ನೂ ವಿರೋಧಿಸಿದರು. ಹೀಗೆ ಈ ಜನಗಳಿಗೆ ಕೊಡಗಿನ ಅಭಿವೃದ್ಧಿ ಬೇಕಿಲ್ಲ. ಇದರ ಬದಲು ಲೋಕಸಭಾ ಸ್ಥಾನಕ್ಕೆ ಆಗ್ರಹಿಸಬಹುದು ಎರಡು ಸಾವಿರ ಇಸವಿ ವೇಳೆಗೆ ಪ್ರತ್ಯೇಕ ಲೋಕಸಭಾ ಸ್ಥಾನ ಕೊಡಗಿಗೆ ಲಭ್ಯವಾಗುವ ಸಂಭವವಿದೆ.

ಕೊ. ಸ. : ಗೌಡ ಸಂಘ ಸಂಸ್ಥೆಗಳಲ್ಲಿ ನಿಮ್ಮ ಸೇವೆಯೇನು ?

ಉ : ಬೆಂಗಳೂರಿನಿಂದ ಬಂದಕೂಡಲೇ 1961–68ರವರೆಗೆ 'ಗೌಡ ವಿದ್ಯಾಸಂಘ'ದಲ್ಲಿ ಅಧ್ಯಕ್ಷನಾಗಿದ್ದೆ, ಮತ್ತೆ 1971–72ರಲ್ಲಿ ಅಧ್ಯಕ್ಷನಾದಾಗ 73ಜನ ವಿದ್ಯಾರ್ಥಿಗಳು ಇದ್ದರು. ಗೌಡ ಸಮಾಜದಲ್ಲಿಯೂ ಉಪಾಧ್ಯಕ್ಷನಾಗಿ, ಅಧ್ಯಕ್ಷನಾಗಿ ಸೇವೆ ಸಲ್ಲಿಸಿದ್ದೇನೆ. ಬೆಂಗಳೂರಿನ ಎರಡು ಕಡೆ 'ಗೌಡ' ಸಂಘ ಸಂಸ್ಥೆಗಳ ಉದ್ಘಾಟನೆಗೆ ಹೋಗಿದ್ದೆ. ಮೈಸೂರಿನ ಕಟ್ಟಡಕ್ಕೂ ಧನ ಸಹಾಯ ಮಾಡಿದ್ದೇನೆ.

ಕೊ.ಸ. : ಗೌಡ ಜನಾಂಗಕ್ಕೆ ನಿಮ್ಮ ಕರೆಯೇನು ?

ಉ : ಮೊದಲು ನಮ್ಮಲ್ಲಿ ಸಂಘಟನೆಯಾಗಿ ನಂತರ ಅಭಿವೃದ್ಧಿ ಬಗ್ಗೆ ಚರ್ಚಿಸಬೇಕು. ಏಕೆಂದರೆ ನಮ್ಮಲ್ಲಿ ಕಾಲೆಳೆಯುವ ಪ್ರವೃತ್ತಿ ಜಾಸ್ತಿ. ಇದು ನನ್ನ ಸ್ವಂತ ಅನುಭವ ಕೂಡ. ನಾವು ಹೊಟ್ಟೆಕಿಚ್ಚು ಬುದ್ಧಿಯನ್ನು ಬಿಡಬೇಕು. ಇತ್ತೀಚಿನ 'ಸಾಂಸ್ಕೃತಿಕ ಅಕಾಡೆಮಿ'ಯ ಕಾರ್ಯಕ್ರಮಬಹಳ ಚೆನ್ನಾಗಿ ಮೂಡಿ ಬಂದಿದೆ. ಈಗ ಸಮ್ಮೇಳನ ನಡೆಸಲು ಸೂಕ್ತ ಪರಿಸ್ಥಿತಿ ನಿರ್ಮಾಣವಾಗಿದೆ. ನಮ್ಮಲ್ಲಿ ಹಿರಿಯರ ಮತ್ತು ಕಿರಿಯರ ನಡುವೆ ಅಂತರ ಹೆಚ್ಚಾಗುತ್ತಿದೆ. ವಿದ್ಯಾಭ್ಯಾಸದಲ್ಲೂ ಅಷ್ಟೇ, ಒಮ್ಮೆ ಅನುತ್ತೀರ್ಣಗೊಂಡರೆ ವಿದ್ಯಾಭ್ಯಾಸವನ್ನು ಅಲ್ಲಿಗೆ ಕೈಬಿಡದೆ ಮುನ್ನಡೆಯಬೇಕು. ಇದು ಕೂಡ ನನ್ನ ಸ್ವಂತ ಅನುಭವ.

ಕುಞಾಳಿ ಮಾದಪ್ಪನವರ ಮಗಳು ಲೀಲಾವತಿಯವರನ್ನು ವಿವಾಹವಾಗಿರುವ ಚಿಣ್ಣಪ್ಪನವರಿಗೆ ಮೂವರು ಪುತ್ರಿಯರು. ಮೊದಲ ಮಗಳು ಅನಿತಾ ವಿವಾಹವಾಗಿ ಮೆಡಿನೋವಾದಲ್ಲಿ ವೈದ್ಯವೃತ್ತಿಯಲ್ಲಿದ್ದಾರೆ. ಎರಡನೆ ಮಗಳು ಪರಿಣಿತ ಡಾಕ್ಟರೇಟು ಪಡೆದು ಅಮೇರಿಕಾದಲ್ಲಿದ್ದರೆ, ಮೂರನೇ ಮಗಳು ಮೃಣಾಳಿನಿ ಕಂಪ್ಯೂಟರ್ ವಿಜ್ಞಾನದಲ್ಲಿ ಪದವಿಗಳಿಸಿರುತ್ತಾರೆ.

ಸರಳತೆ ಸೌಜನ್ಯತೆಯ ಸಾಕಾರ ಮೂರ್ತಿಯಂತೆ ಕಂಡು ಬರುವ ಚಿಣ್ಣಪ್ಪನವರು ಹಲವು ರಂಗಗಳಲ್ಲಿ ದುಡಿದ ಅನುಭವಸ್ಥರು. ಸರ್ವೋತ್ತಮ ವಕೀಲರಾಗಿ ವಯಸ್ಕರ ಶಿಕ್ಷಣ ಸಮಿತಿಯ ಸದಸ್ಯರಾಗಿ ನಂತರ ಅಧ್ಯಕ್ಷರಾಗಿ, ಮಡಿಕೇರಿಯ ಲಯನ್ಸ್ ಕ್ಲಬ್ ಸದಸ್ಯರಾಗಿ, ಕಾರ್ಯದರ್ಶಿಯಾಗಿ ಅಧ್ಯಕ್ಷರಾಗಿ, ಜಿಲ್ಲಾ ಅಧ್ಯಕ್ಷರಾಗಿ, ನಂತರ ಗವರ್ನರ್ ಆಗಿ, ಮೈಸೂರು, ಬೆಂಗಳೂರು ಮಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳ ಅಕಾಡೆಮಿಕ್ ಕೌನ್ಸಿಲ್ ಸದಸ್ಯರಾಗಿಯೂ ಹಲವು ವರ್ಷಗಳ ಕಾಲ ದುಡಿದ ನಮ್ಮ ಜನಾಂಗದ ಮಹಾಮೇರುಗಳಲ್ಲಿ ಇವರೂ ಒಬ್ಬರು ಎಂದರೆ ತಪ್ಪಾಗಲಾರದು. "ಕೊಡಗು ಸಂಗಾತಿ"ಯೊಡನೆ ಇಷ್ಟೆಲ್ಲಾ ಮಾಹಿತಿ ನೀಡಿ ಸಹಕರಿಸಿದ ಮಾಜಿ ಸಚಿವರಿಗೂ, ವಿನಯಪೂರ್ವಕವಾಗಿ ಬೀಳ್ಕೊಟ್ಟ ಶ್ರೀಮತಿ ಲೀಲಾವತಿ ಚಿಣ್ಣಪ್ಪನವರಿಗೂ 'ಸಂಗಾತಿ'ಯ ಧನ್ಯವಾದಗಳು.

# ಗೌಡರ ವಿವಾಹ ಪದ್ಧತಿ

[ಹಿಂದಿನ ಸಂಚಿಕೆಯಿಂದ]

ನಂತರ ವರನ ಮನೆಯಲ್ಲಿ ನಡೆಯುವ ಶೇಷೋಪಚಾರ ಮತ್ತು ನಾಗೋಳಿ ಶಾಸ್ತ್ರಗಳಲ್ಲಿ ಭಾಗವಹಿಸಿ ಹಿಂತಿರುಗುವುದಾಗಿದೆ.

**ನಾಗೋಳಿ ಶಾಸ್ತ್ರ :**

ಮುಹೂರ್ತದಿಂದ ಏಳಿಸು ವಾಗ ಲೂ ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣಿ ಹೇಳಿ ಏಳಿಸಿ ನೆಲ್ಲೆಕ್ಕಿಅಡಿಗೆ ಕರೆತಂದು ಅವರಿಗೂ ಉಟೋಪಚಾರ ಕೊಟ್ಟು [ಮುಹೂರ್ತ ಮಣಿ [ಕಾಸ್ತಾಳಿ] ಕಟ್ಟಿದಲ್ಲಿಂದ ಹಿಡಿದು ಮುಹೂರ್ತ ಮಣಿ ಬಿಚ್ಚುವಲ್ಲಿಯ ತನಕ ಮದುಮಕ್ಕಳು ಮಧ್ಯಮಾಂ ಸ ವ ನ್ನು ಉಪಯೋಗಿಸುವಂತಿಲ್ಲ] ಮದುಮಕ್ಕಳನ್ನು ಮುಹೂರ್ತದಿಂದ ಏಳಿಸಿದ ನಂತರ ಅಡೋಳಿ ಕಂಚಿಮಿಯ ಜವಾಬ್ದಾರಿ ಮುಗಿದಂತೆ. ನಂತರ ನಾಗೋಳಿ ಶಾಸ್ತ್ರಕ್ಕೆ ತೊಡಗುವುದು. ಮೊದಲು ಮೇಲ್ಕಟ್ಟಿನಡಿಯಲ್ಲಿ ಒಂದು ಕುಕ್ಕೆಯಲ್ಲಿ ಗೋವಿನ ಸಗಣಿ ಗೊಬ್ಬರವನ್ನು ತುಂಬಿಸಿ ತಂದಿಟ್ಟಿರುತ್ತಾರೆ. ಇದರೊಂದಿಗೆ ಹಾಲೆ ಮರದ ಕೊಂಬೆ ಇಲ್ಲವೇ ಮಾವಿನ ಮರದ ಕೊಂಬೆ ಸೊಪ್ಪು ಸಹಿತ ಇರುವುದು. ಈಗ ವಧುವರರು ತಮ್ಮ ಹೆಚ್ಚಿನ ಮೇಲಂಗಿಗಳನ್ನು ಕಳಚಿ [ಕೋಟು, ಪೇಟ. ಮುಸುಕಿನ ವಸ್ತ್ರ ಮೊದಲಾದವನ್ನು] ಮೇಲ್ಕಟ್ಟ ನಡಿಯಲ್ಲಿ ಇರುವ ಗೊಬ್ಬರದ ಕುಕ್ಕೆಯನ್ನು ಮೊದಲು ವಧುವು ತನ್ನ ತಲೆಗೆ ಹೊರಿಸುವುದಕ್ಕೆ ತನ್ನ ಪತಿಯನ್ನು ಕೇಳುವುದು. ಅವಳು ಗೊಬ್ಬರ ಹೊರಿಸಿ ಎಂದು ಕೇಳಿದ ನಂತರ ವರನು ಕುಕ್ಕೆಯನ್ನು ತಲೆಗೆ ಹೊರಿಸುವುದು. ವರನು ಅಲ್ಲಿಯೇ ಇರುವ ಮಾವಿನಕೊಂಬೆಯನ್ನು ಹೆಗಲಲ್ಲಿರಿಸಿ ಗದ್ದೆಯ ಕಡೆಗೆ ಮುಂದೆ ನಡೆಯುವುದು. ಇದು ವಾದ್ಯದೊಂದಿಗೆ ಹೋಗಿ ಬೀಜ ಹಾಕುವ ತಾಯಿ ಗದ್ದೆಗೆ ಮದುಮಗನು ಸೊಪ್ಪು ಹಾಕಿದ ನಂತರ ಅದರ ಮೇಲೆ ವಧುವು ತಾನು ಹೊತ್ತು ತಂದಿರುವ ಗೊಬ್ಬರವನ್ನು ಹಾಕುವುದು. ಬರುವಾಗ ನೀರು ತರುವುದು. ಇಲ್ಲಿಯು ಕೂಡಾ ನೀರು ಹೊರಿಸುವುದಕ್ಕೆ ಪತಿಯನ್ನು ಕೇಳಬೇಕು. ಅವಳು ನೀರು ಹೊರುವ ಬಿಂದಿಗೆಯು ಚಿಕ್ಕದಾಗಿರಬೇಕು. ಅವಳ ಜೊತೆಯಲ್ಲಿ ಇನ್ನೆರಡು ಕನ್ಯೆಯರು ಚಿಕ್ಕ ಚಿಕ್ಕ ತಂಬಿಗೆಯಲ್ಲಿ ನೀರು ತರುವುದಾಗಿದೆ. ಮದುವಣ್ಣನು ನೀರನ್ನು ತಲೆಗೆ ಹೊರಿಸಿದ ನಂತರ ಓಲಗದೊಂದಿಗೆ ಕುಣಿತ ಹಾಕುತ್ತಾ ಮನೆಗೆ ಸಾಗುವರು. [ವಧುವು ತನ್ನ ಮನೆಯಲ್ಲಿ ನಡೆದ ಚಪ್ಪರದ ಶಾಸ್ತ್ರದವರೆಗೆ ಕೆಲವೊಮ್ಮೆ ಮೂರು ದಿನಗಳಾಗುವುದು ಉಂಟು. ಆಗ ಅವಳಿಗೆ ಬಹಳಷ್ಟು ಆಯಾಸವಿರುತ್ತದೆ. ಆದುದರಿಂದ ಕುಕ್ಕೆಯಲ್ಲಿ ಹೆಚ್ಚಿಗೆ ಗೊಬ್ಬರ ತುಂಬಿಸುವುದಾಗಲಿ, ದೊಡ್ಡ ಬಿಂದಿಗೆಯಲ್ಲಿ ನೀರು ಹೊರಿಸುವುದಾಗಲಿ ಮತ್ತು ಹೆಚ್ಚು ಹೊತ್ತು ದಾರಿ ತಡೆದು ಕುಣಿಯುವುದಾಗಲಿ ಮಾಡಬಾರದು. ಏಕೆಂದರೆ ನೀರು ಹೊತ್ತ ಬಿಂದಿಗೆಯು ಅವಳ ಹಿಡಿತ ತಪ್ಪಿದರೆ ಹಿಂದೂ ಶಾಸ್ತ್ರದ ಪ್ರಕಾರ ಅದೊಂದು ಅಪಶಕುನವಾಗುತ್ತದೆ. ಇದಕ್ಕಾಗಿ ಮನೆಯ ಹಿರಿಯರು ಇಲ್ಲವೇ ಊರು ಗೌಡರು/ಮುಖ್ಯಸ್ಥರು ನಾಗೋಳಿ ಶಾಸ್ತ್ರ ನಡೆಯುವಾಗ ಇದರ ಬಗ್ಗೆ ನಿಗಾ ವಹಿಸತಕ್ಕದ್ದು] ಮದುಮಗಳು ಹೊತ್ತು ತಂದ ನೀರನ್ನು ಮಡಿಲಕ್ಕಿಇಟ್ಟಲ್ಲಿ ನೆಲ್ಲೆಕ್ಕಿ ಅಡಿಯಲ್ಲಿ ಇಡುವುದು. ಅದೇ ನೀರಿನಿಂದ ಮಡಿಲಕ್ಕಿಯನ್ನು ಹಾಕಿ ವಧುವು ಪಾಯಸ ಮಾಡುವುದು. ನೀರು ತರುವಾಗ ಬಾಗಿಲು ತಡೆಯುವ ಒಂದು ಕ್ರಮವಿರುತ್ತದೆ.

**ಬಾಗಿಲು ತಡೆಯುವ ಕ್ರಮ :**

ಇಲ್ಲಿ ಹೆಣ್ಣು ನೀರು ಹೊತ್ತು ತರುವಾಗ ಮನೆಯ ಹೆಬ್ಬಾಗಿಲಿನಲ್ಲಿ ವರನ ಅಕ್ಕತಂಗಿಯರು ಬಾಗಿಲು ತಡೆಯುವರು. ಇಲ್ಲಿ ಬಾಗಿಲು ತಡೆಯುವುದು ಇದುವರೆಗೆ ವಧುವು ವರನನ್ನು ಬಹುಶಃ ಏಕ ವಚನದಲ್ಲಿ ಹೆಸರು ಹೇಳಿ ಕರೆಯುತ್ತಿದ್ದರೂ ಇಂದಿನಿಂದ ಸತಿ ಪತಿಯರಾದ ನಂತರ ಸತಿಯಾದವಳು ಪತಿಯನ್ನು ಬಹುವಚನದಲ್ಲಿ ಸಂಬೋಧಿಸುವುದಲ್ಲದೇ ಹೆಸರು ಹೇಳಬಾರದು ಎನ್ನುವ ಪದ್ಧತಿ. ಅವರಿಬ್ಬರಿಂದಲೂ, ವರನಿಂದ ವಧುವಿನ ಹೆಸರನ್ನು ವಧುವಿನಿಂದ ವರನ ಹೆಸರನ್ನು ಹೇಳಿಸಿ ಒಳಗೆ ಬಿಡುವರು. ಇಲ್ಲಿಗೆ ಕೊನೆಯಾಗಿ ಅವಳು ಪತಿಯ ಹೆಸರನ್ನು ಹೇಳಿ ಕಟ್ಟು ಕಳೆದಂತೆ ಎಂದು ಹಿಂದಿನಿಂದ ನಡೆದು ಬಂದ ಪದ್ಧತಿ.

**ಓಕುಳಿಯಾಟ :**

ಈ ಓಕುಳಿಯಾಟ ಮತ್ತು ಉಂಗುರ ಹುಡುಕುವುದು ಬಹಳಷ್ಟು ಕಡಿಮೆ. ಕೆಲವು ಕಡೆಗಳಲ್ಲಿ ಇದನ್ನು ನೀರು ತರುವುದಕ್ಕೆ ಮುಂಚಿತವಾಗಿಯೂ, ಹಲವು ಕಡೆಗಳಲ್ಲಿ ನಂತರವೂ ನಡೆಸುತ್ತಾರೆ. ಚಪ್ಪರದ ಅಡಿಯಲ್ಲಿ ಒಂದು ಹಂಡೆಯಲ್ಲಿ ಅರಶಿನ ಮಿಶ್ರ ಮಾಡಿದ ನೀರನ್ನು ತುಂಬಿಸಿ ಅದರೊಳಗೆ ಕೈಗಳನ್ನು ಹಾಕಿ ಹುಡುಕುತ್ತಾರೆ. ಆ ಉಂಗುರ ಸಿಕ್ಕಿದವರ ಪಾಲಿಗಾಯಿತು. ನಂತರ ಎದುರು ಬದುರು ನಿಂತು ನೀರನ್ನು ಎರಚಿಕೊಳ್ಳುತ್ತಾರೆ.

**ಪೆಟ್ಟಿಗೆ ನೋಡುವ ಪದ್ಧತಿ :**

ಹುಡುಗಿಯ ಮನೆಯಿಂದ ಅವಳ ತಂದೆ ತಾಯಿ ಮಗಳಿಗೆ ಬಳುವಳಿಯಾಗಿ ಕೊಟ್ಟ ಸಾಮಾನುಗಳನ್ನು ವಧುವಿನ ಕಡೆಯ ನೆಂಟರಿಷ್ಟರು, ಊರುಗೌಡರು/ಮುಖ್ಯಸ್ಥರು ಸೇರಿ ವಧುವಿನ ಸಮ್ಮುಖದಲ್ಲಿ ಪೆಟ್ಟಿಗೆ ತೆರೆದು ಅದರಲ್ಲಿರುವ ವಸ್ತುಗಳನ್ನು ಪಟ್ಟಿ ಮಾಡಿ ಪೆಟ್ಟಿಗೆಯ ಮೇಲ್ಭಾಗದಲ್ಲಿ ಒಂದು ನಕಲನ್ನು ಇಟ್ಟಿರುತ್ತಾರೆ. ಗಂಡಿನ ಮನೆಯಲ್ಲಿ ಮೇಲ್ಕಟ್ಟಿನಡಿಯಲ್ಲಿ ವಧುವೂ ಕೂಡಿದಂತೆ ಎಲ್ಲರ ಸಮ್ಮುಖದಲ್ಲಿ ತೆರೆದು ತೋರಿಸುವುದು.

(ಮುಂದುವರೆಯುವುದು)

ಕೃಪೆ :
**ಗೌಡ ಸಂಸ್ಕೃತಿ ಕುಟುಂಬ ಕೈಪಿಡಿ**

# ಮಹಿಳೆಯರು ಸಂಘಟಿತರಾಗಲು ಕರೆ

## ಮೈಸೂರಿನಲ್ಲಿ 'ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಒಕ್ಕೂಟ'ದ ಸಭೆ

'ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ' ಮಹಿಳಾ ಸಂಘಟನೆಗಳು ಈಗಾಗಲೇ ಹಲವಾರು ಕಡೆ ಸ್ಥಾಪಿತ ಗೊಂಡು ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿವೆ. ಮೈಸೂರಿನಲ್ಲಿ ಸಂಘಟನೆ ಸ್ಥಾಪಿತಗೊಂಡರೂ ಪ್ರೋತ್ಸಾಹ, ಪ್ರತಿಕ್ರಿಯೆ ಗೌಣವಾಗಿದೆ. ಆದರೆ ಇನ್ನು ಮುಂದೆ ಇದಕ್ಕೆ ಅವಕಾಶ ನೀಡೆವು, ಮುಂದಿನ ಪ್ರತೀ ಸಭೆಗಳಲ್ಲಿಯೂ ಆಕರ್ಷಕ ಕಾರ್ಯಕ್ರಮ ಹಾಕಿಕೊಂಡು ಪ್ರತಿಭೆಗಳನ್ನು ಹುಟ್ಟುಹಾಕೋಣ,ಆ ಮೂಲಕ ಮೈಸೂರಿನಲ್ಲಿ ಬೃಹತ್ತಾಗಿ ಮಹಿಳೆಯರು ಸಂಘಟಿತರಾಗಬೇಕೆಂದು ಮೈಸೂರಿನ 'ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ' ಮಹಿಳಾ ಸಂಘಟನೆ ಕರೆ ನೀಡಿದೆ.

ಫೆಬ್ರವರಿ 8 ರಂದು ಹಳೆಯ ಸಮಿತಿಯನ್ನು ವಿಸರ್ಜಿಸಿ, ಹೊಸ ಸಮಿತಿಯನ್ನು ರಚಿಸಲೋಸುಗ ಈ ಮಹಿಳಾ ಸಂಘಟನೆ ಸಭೆ ಸೇರಿತ್ತು. ಆದರೆ ಸಭಾಧ್ಯಕ್ಷೆ ದಂಬೆಕೋಡಿ ಭಾಗೀರಥಿಯವರು 'ಹಳೆಯ ಸಮಿತಿಯವರೇ ಮುಂದುವರಿಯಬೇಕು, ಅವರಿಗೆ ಎಲ್ಲಾ ರೀತಿಯ ಸಹಕಾರ ಪ್ರೋತ್ಸಾಹನನ್ನು ನಾವುಗಳು ನೀಡುತ್ತೇವೆ. ಯಾವುದೇ ಕಾರಣಕ್ಕೂ ಸಮಿತಿಯನ್ನು ಬದಲಿಸಬಾರದು' ಎಂದು ತಮ್ಮ ನಿರ್ಣಯ ಮಂಡಿಸಿದಾಗ ಎಲ್ಲಾ ಮಹಿಳೆಯರು ಕೈ ಎತ್ತಿ ತಮ್ಮ ಸಹಾನುಮತ ವ್ಯಕ್ತಪಡಿಸಿದರು. ಈ ಸಮಿತಿಗೆ ಸಹಕಾರ ನೀಡಲು ಇಬ್ಬರು ಪದಾಧಿಕಾರಿಗಳನ್ನು ನೇಮಿಸಲಾಯಿತು. ಕುಂಭಗೌಡನ ಮುತ್ತಮ್ಮನವರು ಉಪಾಧ್ಯಕ್ಷರಾಗಿ, ಚೆಟ್ಟಿನಾಡ ಲಕ್ಷ್ಮಿಯವರು ಜಂಟೀ ಕಾರ್ಯದರ್ಶಿಯಾಗಿ ನೇಮಕಗೊಂಡರು.

ನಂತರ ಸಭೆಗೆ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಕೂರನ ಚಂದ್ರಾವತಿಯವರು ಸಭೆಯನ್ನುದ್ದೇಶಿಸಿ ಮಾತನಾಡಿ 'ಇಂದಿನ ಯುವತಿಯರು ಸಂಸ್ಕೃತಿಯನ್ನು ಮರೆಯುತ್ತಾ ಬರುತ್ತಿದ್ದು, ಇಂದು ಕೇವಲ ಕೆಲವೇ ಹಿರಿಯರಲ್ಲಿ ಮಾತ್ರ ಸಂಸ್ಕೃತಿ ನೆಲೆಗೊಂಡಿದೆ, ಎಂದು ಕಳವಳ ವ್ಯಕ್ತಪಡಿಸಿದರು. ನಮ್ಮ ಪ್ರತಿಭೆಗಳು ತುಕ್ಕು ಹಿಡಿಯಲು ಅವಕಾಶ ನೀಡದೆ ಒರೆಗೆ ಹಚ್ಚಬೇಕೆಂದು ತಿಳಿ ಹೇಳಿದರು. ಸಭಾಧ್ಯಕ್ಷೆ ದಂಬೆಕೋಡಿ ಭಾಗೀರಥಿಯವರು ಅತ್ಯಂತ ಶೀಘ್ರವಾಗಿ ಮಹಿಳೆಯರು ತಮ್ಮ ಸದಸ್ಯತ್ವವನ್ನು ಪಡೆಯಬೇಕು ಈ ಮೂಲಕ ಕ್ಷಿಪ್ರಗತಿಯಲ್ಲಿ ಸಂಘಟಿತರಾಗಬೇಕೆಂದು ಕರೆಕೊಟ್ಟರು.

**ಮಹಿಳಾ ಸಂಘಟನೆಯ ಪ್ರತಿನಿಧಿಗಳು :** ಮೈಸೂರಿನ ವಿವಿಧ ಬಡಾವಣೆಗಳಲ್ಲಿ ಮಹಿಳಾ ಸಂಘಟನೆಯ ಪರವಾಗಿ ಸಂಘಟನೆಗೊಳಿಸಲು ತನ್ನ ಪ್ರತಿನಿಧಿಗಳನ್ನು ಆರಿಸಿತು. ಸರಸ್ವತಿಪುರಂ ದಂಬೆಕೋಡಿ ಭಾಗೀರಥಿ, ಸಿದ್ಧಾರ್ಥನಗರ ನಾಟೋಳನ ಸೀತಮ್ಮ ಜಯಲಕ್ಷ್ಮಿಪುರಂ ಪಟ್ಟಡ ಶೀಲಾಮಣಿ, ರಾಮಕೃಷ್ಣನಗರ ಕೂರನ ಚಂದ್ರಾವತಿ, ಕುವೆಂಪುನಗರ ಚೆರಿಯಮನೆ ಶಾರದ ರಾಮಚಂದ್ರ, ಜಾಕಿಕ್ವಾಟ್ರಸ್ ಪಟ್ಟಡ ಪದ್ಮಾ ಸೋಮಣ್ಣ, ಹಿನಕಲ್ ಮುಕ್ಕಾಟಿ ಮೀನಾಕ್ಷಿ ಗೋಪಾಲ, ಹೆಬ್ಬಾಳು ಕಡ್ಯದ ಶ್ಯಾಮಲ ತಾರಣಯ್ಯ, ಚಾಮುಂಡಿಪುರಂ ಬಾಲಾಡಿ ಲಕ್ಷ್ಮಿ ಉತ್ತಯ್ಯ, ವಿಜಯನಗರ ಹುದೇರಿ ಹೇಮಾವತಿ ಸೋಮಣ್ಣ, ಮೇಟ್ಗಳ್ಳಿ ಕುಯ್ಯುಮುಡಿ ಲೀಲಾವತಿ ಮಾಚಯ್ಯ. ಇವರು ಮಹಿಳಾ ಸಂಘಟನೆಯ ಪ್ರತಿನಿಧಿಗಳಾಗಿದ್ದು ಆಯಾಯ ಬಡಾವಣೆಗಳ ಮಹಿಳೆಯರು ಅವರೊಡನೆ ಸಹಕರಿಸಬೇಕೆಂದು ಮಹಿಳಾ ಸಂಘಟನೆಯು ತಿಳಿಸಿದೆ.

**ಜಂಟೀ ಕಾರ್ಯಕ್ರಮದ ಯಶಸ್ಸಿಗೆ ಪಣ :** ಮಹಿಳೆಯರು ಶೀಘ್ರವಾಗಿಸಂಘಟನೆಗೂಳ್ಳುವುದರ ಜೊತೆಗೆ ಏಪ್ರಿಲ್ 12 ರಂದು ಕಲಾ ಮಂದಿರದಲ್ಲಿ ನಡೆಯಲಿರುವ 'ಅರೆಭಾಷಿಕ ಸಾಂಸ್ಕೃತಿಕ' ಕಾರ್ಯಕ್ರಮದಲ್ಲಿ ತಮ್ಮ ಜವಾಬ್ದಾರಿಯು ಬಹಳಷ್ಟು ಇರುವುದರಿಂದ ಅದರ ಯಶಸ್ಸಿಗೆ ಶಕ್ತಿ ಮೀರಿ ಪ್ರಯತ್ನಿಸುವುದಾಗಿ 'ಅರೆಭಾಷಿಕ ಸಾಂಸ್ಕೃತಿಕ ಸಮಿತಿ'ಯ ಅಧ್ಯಕ್ಷರಿಗೆ ಭರವಸೆ ನೀಡಿದೆ ಅಂದು ಯಾವುದೇ ಕಾರ್ಯಕ್ರಮ ನೀಡಬಯಸುವ ಮಹಿಳೆಯರು, ಯುವತಿಯರು ತಕ್ಷಣ ಮಹಿಳಾ ಸಂಘಟನೆಯ ಪದಾಧಿಕಾರಿಗಳನ್ನು ಭೇಟಿಯಾಗಿ ಸೂಕ್ತ ಮಾರ್ಗದರ್ಶನ ಪಡೆಯತಕ್ಕದ್ದು ಎಂದು ಅದು ತಿಳಿಸಿದೆ.

ಮಹಿಳಾ ಸಂಘಟನೆಯ ಸಭೆಯು ಕಾರ್ಯದರ್ಶಿ ಗೀತಾ ಮೋಂಟಡ್ಕರವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು, ಅಧ್ಯಕ್ಷೆ ಧನು ಚೆರಿಯಮನೆ ಸ್ವಾಗತಿಸಿ ಸಭೆಯಉದ್ದೇಶಗಳನ್ನು ತಿಳಿಸಿದರು. ಸಭೆಯಲ್ಲಿ ಕೈಗೂಸುಗಳಿಂದ ಹಿಡಿದು ಮುದುಕಿಯರವರೆಗೂ ಮಹಿಳೆಯರು ಅತಿ ಉತ್ಸಾಹದಿಂದ ನೆರೆದಿದ್ದರೂ ಸಾಂಪ್ರದಾಯಿಕ ಉಡುಪು ಅತ್ತ ಸುಳಿದಿರಲೇ ಇಲ್ಲ. ಗೀತಾ ಮೋಂಟಡ್ಕರವರ ವಂದನಾರ್ಪಣೆಯ ಬಳಿಕ ರಾಷ್ಟ್ರಗೀತೆಯೊಡನೆ ಸಭೆಯು ಮುಕ್ತಾಯಗೊಂಡಿತು.

● ವರದಿ : ಶಿವಕುಮಾರ್

---

**ಸೂಕ್ತಿ**

ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡುವುದು ಲೋಕದ ನೀತಿ, ಆದರೆ ಅಪಕಾರ ಮಾಡಿದವರಿಗೂ ಉಪಕಾರ ಮಾಡುವುದು, ಉತ್ತಮರ ಲಕ್ಷಣ.

–ಗುರುನಾನಕ್

# ಗೌಡ ಕೇಸರಿ ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ

[ಹಿಂದಿನ ಸಂಚಿಕೆಯಿಂದ]

**ಕೊ**ಟ್ಟಪಾಳೆ, ತುಳುವ, ಎಂಬ ತಿರಸ್ಕಾರದ ಹೇಳಿಕೆಗಳನ್ನು ತೊಡೆದು ಹಾಕಲು ಪಣ ತೊಟ್ಟರು. ಈ ವಿಷಯುವನ್ನು ಕೊಡಗಿನ ನಮ್ಮ ಸಮಾಜದ ಹಿರಿಯರು ಈಗಲೂ ಹೇಳುತ್ತಿದ್ದಾರೆ. ಗತಕಾಲದ ಆ ಸಂದರ್ಭಗಳನ್ನು ಸಂತೋಷದಿಂದ ಹೇಳಿಕೊಂಡಾಗ ನನಗೆ ನನ್ನ ಹಿರಿಯರ ಬಗ್ಗೆ ಹೆಮ್ಮೆ ಎನಿಸುತ್ತದೆ.

ನನ್ನಜ್ಜನ ಜೀವಿತದಲ್ಲಿ ಒಂದು ತಿರುವು. ಮತ್ತೆ ಅವರು ಗುಡ್ಡೆ ನಿಡ್ಯಮಲೆಗೆ ಬಂದು ವಾಸಿಸತೊಡಗಿದರು. ನಮ್ಮ ಹಿರಿಯರು ಕಟ್ಟಿಸಿದಂತಹ ನಾಲ್ಕು ಚೌಕಟ್ಟಿನಿಂದ ಕೂಡಿದ ಐನ್‌ಮನೆಯಿದ್ದು, ಕುಟುಂಬದ ಎಲ್ಲರೂ ಒಟ್ಟಿಗೆ ವಾಸಿಸುತ್ತಿದ್ದರಂತೆ. ಇಂಥ ಸಂಬಂಧದಲ್ಲಿ ನಮ್ಮ ದುರದೃಷ್ಟವೋ ಏನೋ ಎಂಬಂತೆ ನನ್ನಜ್ಜನಿಗೆ ಹೊಸ ಆಲೋಚನೆಯೊಂದು ಹೊಳೆಯಿತು. ಆ ಪ್ರಕಾರ ಪೆರಾಜೆಯ ಮುಖ್ಯ ರಸ್ತೆಯ ಸಮೀಪ ಆಸ್ತಿ ಪಡೆದು ನಿಡ್ಯಮಲೆ ಐನ್ ಮನೆಯನ್ನು ಮುರಿದು ಅದರ ಸಾಮಗ್ರಿಗಳನ್ನು ತಂದು ಮನೆಯನ್ನು ಕಟ್ಟಿಸಿದರು. ಕ್ರಮೇಣ ಅಲ್ಲಿ ಕೆಲವು ತೊಂದರೆಗಳು ಕಂಡುಬಂದು ಈ ಸುಳ್ಯ ವಲಯದಲ್ಲಿ ಪ್ರಮುಖರಾಗಿರುವ ಶ್ರೀಯುತ ದಿವಾಕರ ರೈಯವರ ಹಿರಿಯರಿಗೆ ಮಾರಿ ಈಗ ನನ್ನ ವಾಸಸ್ಥಳವಾದ ಪೆರಾಜೆಗೆ ಬಂದು ನೆಲೆ ನಿಂತರು. ವಿಹಾರಾರ್ಥಿಗಳು ಸಂದರ್ಶಿಸತಕ್ಕ ಸ್ಥಳವಾದ ಕೇಳಿಲಿಕ್ಕ ಮಲೆಯ ಬುಡ ಪ್ರದೇಶದಲ್ಲಿ ಯಾಲಕ್ಕಿಯನ್ನು, ಈ ನಮ್ಮ ಮನೆ ಇರುವ ಪರಿಸರದಲ್ಲಿ ಕಾಫಿಗಿಡ ನೆಡಲು ಯತ್ನಿಸಿ ವಿಫಲರಾದರು. ಇದರಿಂದಾಗಿ ಈಗಿರುವ ನನ್ನ ಮನೆಗೆ ಕಾಫಿತೋಟ ಎಂಬ ಹೆಸರು ರೂಢಿಗೆ ಬಂತು.

1910ರಲ್ಲಿ ನನ್ನ ಅಜ್ಜ ಇಲ್ಲಿ ವಾಸಿಸಲು ತೊಡಗಿದರು. ನನ್ನಜ್ಜನಿಗೆ ಈಗಿನ ಕೇರಳಕ್ಕೆ ಸೇರಿದ ಕಲ್ಲಪಳ್ಳಿ ಎಂಬಲ್ಲಿಯ ಹಂದಿಪಾರೆ ಎಂದು ಹೆಸರಿಸಲ್ಪಡುವ ಮತೆತನದ ಕಾಳಮ್ಮ ಎಂಬುವರನ್ನು ಪ್ರಥಮವಾಗಿ ವಿವಾಹವಾಗಿದ್ದರು. ಆದರೆ ಸಂತಾನ ಲಭಿಸಿರಲಿಲ್ಲ. ಹಾಗಾಗಿ ಈಗ ಆಲಟ್ಟಿ ಗ್ರಾಮಕ್ಕೆ ಸೇರಿರುವ ಕೋಲ್ಚಾರು ಮನೆತನದ ತಂಗಮ್ಮ ಎಂಬುವರನ್ನು ಎರಡನೇ ವಿವಾಹವಾಗಿದ್ದರು. ಇವರು ಬಹಳ ಸಮರ್ಥೆ ಮತ್ತು ಸ್ಪುರದ್ರೂಪಿಯಾಗಿದ್ದರು. ಕೋಲ್ಚಾರಿನ ಹಿರಿಯ ವ್ಯಕ್ತಿ ಮಣೆಗಾರ [ಫಾರೆಸ್ಟರ್] ರವರಿಗೆ ಇವರು ಮೊಮ್ಮಗಳಾಗಿ ಜನಿಸಿದ್ದರು. ಮಣೆಗಾರ ಅಜ್ಜ ಬಹಳ ಹೆಸರುವಾಸಿಯಾದ ಶೂರ ಹಾಗೂ ಧೀರರಾಗಿದ್ದರು. ಇವರ ಮುಖದ ಎರಡು ಭಾಗದ ಮೀಸೆಯಲ್ಲಿ ಎರಡು ನಿಂಬೆಹುಳಿಗಳು ನಿಲ್ಲುವಷ್ಟು ಬಲಿಷ್ಠ ದೇಹಧಾರ್ಢ್ಯ ವ್ಯಕ್ತಿಯಾಗಿದ್ದರು. ಇವರು ಸೈನಿಕರಾಗಿದ್ದು ಕೊನೆಗೆ ಅದನ್ನು ತ್ಯಜಿಸಿ ಕೋಲ್ಚಾರಿನಲ್ಲಿ ವಾಸಿಸತೊಡಗಿದ್ದರಂತೆ. ಹೀಗಿರುವಾಗ ಯಾರೋ ಪಿತೂರಿ ನಡೆಸಿ ಇವರಿರುವ ಸ್ಥಳದ ವಯಹಿತಿಯನ್ನು ನೀಡಿದಾಗ ದೊರೆ ಸೈನಿಕರಿಗೆ ಅವರನ್ನು ಬಂಧಿಸಿ ತರುವಂತೆ ಆಜ್ಞೆ ಮಾಡಿದರಂತೆ. ಹೀಗೆ ಮಾಡಲು ಸಾಧ್ಯವಾಗದ ಸೈನಿಕರು ಅವರ ಮನೆಗೆ ಬೆಂಕಿ ಇಟ್ಟು ಅವರ ರುಂಡ ಕಡಿದು ದೊರೆಗಳಿಗೆ ಒಪ್ಪಿಸಿದಾಗ ಮೃತರ ಮುಖದ ಮುಖಶಾಂತಿ ತೇಜಸ್ಸುಗಳನ್ನು ನೋಡಿ ಇವರ ಮರಣಕ್ಕೆ ಕಾರಣರಾದ ಸೈನಿಕರನ್ನು ಛೀಮಾರಿ ಹಾಕಿ ನಿಂದಿಸಿದರಂತೆ. ಇವರು ಬಹುಶಃ ಕೆದಂಬಾಡಿ ರಾಮೇಗೌಡ ಹಾಗು ಅಮರಸುಳ್ಯ ಕಾಟಾಕಾಯಿ ಕಲ್ಯಾಣಪ್ಪನ ಸಮಕಾಲೀನರು ಆಗಿರಬಹುದು ಎಂದು ಊಹಿಸಲಾಗಿದೆ. ವೀರಯೋಧನ ಮನೆಯಲ್ಲಿ ಜನಿಸಿದ ಸ್ತ್ರೀಯಾದ ತಂಗಮ್ಮನವರ ಗರ್ಭದಲ್ಲಿ ಜನಿಸಿದವರೇ ನಿಡ್ಯಮಲೆ ಬೆಳ್ಯಪ್ಪ, ಮುದ್ದಪ್ಪ ಮತ್ತು ಸೋಮಣ್ಣನವರು. ಅಲ್ಲದೆ ತಂಗಮ್ಮನವರನ್ನು ಮದುವೆಯಾದ 6 ತಿಂಗಳಲ್ಲಿ ಕಾಳಮ್ಮನವರೂ ಗರ್ಭಿಣಿಯಾಗಿ ಇಬ್ಬರು ಪುತ್ರರ ತಾಯಿಯಾದರು. ಹಾಗಾಗಿ ನನ್ನಜ್ಜನಿಗೆ ಐದು ಗಂಡು ಮಕ್ಕಳು ಜನಿಸಿದರು.

ನನ್ನಜ್ಜ ಈ ಕಾಫಿತೋಟ ಎಂಬಲ್ಲಿ ನೆಲೆನಿಂತಾಗ ನನ್ನ ತಂದೆಗೆ 25ವರ್ಷ ವಯಸ್ಸಾಗಿತ್ತಂತೆ. ಪಾರುಪತ್ತೇಗಾರ ರಾಮಪ್ಪನವರು ಯಾವ ಇಸವಿಯಲ್ಲಿ ಮರಣಪಟ್ಟರು ಎಂದು ಹೇಳಲು ನನಗೆ ಸಾಧ್ಯವಾಗುತ್ತಿಲ್ಲ.

● **ದಿ|| ನಿಡ್ಯಮಲೆ ಅನಂತ್**

ನನ್ನಜ್ಜಿ ತಂಗಮ್ಮನವರು ಇರುವ ಕಾಲದಲ್ಲಿಯೇ ನನ್ನ ಚಿಕ್ಕತಂದೆ ಮುದ್ದಪ್ಪನವರ ಪಾಲಿಗೆ ಸಿಕ್ಕಿದ ಪೆರಾಜೆಯ ಪಲಿಕಜೆ ಆಸ್ತಿಯನ್ನು ಅಲ್ಲದೆ ಚಿಕ್ಕತಂದೆ ಸೋಮಣ್ಣನವರ ಪಾಲಿಗೆ ಸಿಕ್ಕಿದ ಪೆರಾಜೆ ಗ್ರಾಮದ ನೈರುತ್ಯ ಭಾಗದಲ್ಲಿರುವ ಆಸ್ತಿಯನ್ನು ಪಡಕೊಂಡಿದ್ದರು. ಬಹಳ ಬುದ್ಧಿ, ಸಾಮರ್ಥ್ಯದಿಂದ ಕೂಡಿದವರಾಗಿದ್ದರು. ನಮ್ಮಜ್ಜಿ ಹೀಗೆ ರಾಮಪ್ಪದಂಪತಿಗಳು ಗೌಡ ಸಮುದಾಯಕ್ಕೆ, ಗ್ರಾಮಕ್ಕೆ ಮತ್ತು ಮನೆತನಕ್ಕೆ ಕೀರ್ತಿ ತಂದವರು.

(ಭಾಗ –೧ ಮುಗಿಯಿತು)

## ತಿಳಿದು ಕೊಳ್ಳುವ ವಿಷಯ

ಸೂರ್ಯನ ಬೆಳಕಿನ ಸಹಾಯದಿಂದ ನಮಗೆ ವಿಟಮಿನ್ 'ಡಿ' ಸಿಗುತ್ತದೆ.

1931ರ ವರೆಗೆ ಅಮೇರಿಕಾದಲ್ಲಿ ರಾಷ್ಟ್ರಗೀತೆ ಇರಲಿಲ್ಲ.

ಭೂಮಿಯ ಮೇಲೆ ವಾಸಮಾಡುವ ಜೀವರಾಶಿಗಳಲ್ಲಿ ಶೇ 85ರಷ್ಟು ಹುಳ ಮತ್ತು ಹುಪ್ಪಟೆಗಳು ಇರುತ್ತವೆ.

○ **ಕೋಳುಮಾಡನ ಸಿ. ಸುಜಾತ**
ಅರ್ವತೋಕ್ಲು

## ಕೀರ್ತಿ ತಂದ ನಮ್ಮ ಹುಡುಗ

ಶ್ರೀ ದೇವಜನ ಲಕ್ಷ್ಮಣಕುಮಾರ್ ಗಿರೀಶ್ ಕುಮಾರ್ 1997ನೇ ಸಾಲಿನ ಮಾರ್ಚಿಯಲ್ಲಿ ನಡೆದ ದ್ವಿತೀಯ ಪಿ.ಯು.ಸಿ ಪರೀಕ್ಷೆಯ ಕಲಾ ವಿಭಾಗದಲ್ಲಿ ಶೇ 86 ರಷ್ಟು ಅಂಕಗಳನ್ನು ಗಳಿಸಿ, ರಾಜ್ಯಕ್ಕೆ 8ನೇ ರ್‍ಯಾಂಕ್ ಪಡೆದು ಕೊಡಗು ಗೌಡ ಜನಾಂಗದ ಕೀರ್ತಿಗೆ ಇನ್ನೊಂದು ಮುಕುಟ ಮಣಿಯನ್ನು ಪೋಣಿಸಿದ್ದಾನೆ. ಮಡಿಕೇರಿ ತಾಲ್ಲೂಕು ಕುಂಬಳದಾಳು ಗ್ರಾಮದ ದೇವಜನ ಚಿಣ್ಣಪ್ಪ ಲಕ್ಷ್ಮಣಕುಮಾರ್ ಮತ್ತು ಕುಸುಮಾವತಿ ದಂಪತಿಗಳ ಅವಳಿ ಜವಳಿ ಗಂಡು ಮಕ್ಕಳಲ್ಲಿ ಈತ ಎರಡನೆಯವನು. ಇವನ ತಂದೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಶಿವಮೊಗ್ಗದಲ್ಲಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಗಿರೀಶ್ ಕುಮಾರ್ ತನ್ನ ಈ ಪ್ರಯತ್ನಕ್ಕೆ ಅಜ್ಜ ಚಿಣ್ಣಪ್ಪ ಮತ್ತು ಅಜ್ಜಿ ಪಾರ್ವತಮ್ಮ ಇವರ ಪ್ರೋತ್ಸಾಹ ಹಾಗೂ ಆಶೀರ್ವಾದವೇ ಕಾರಣವೆಂದು ಹೇಳುತ್ತಾನೆ.



ಗಿರೀಶ್‌ಕುಮಾರ್

ಆಳಿಕೆಯ ಪ್ರತಿಷ್ಠೆಯ ಶ್ರೀ ಸತ್ಯಸಾಯಿ ಕಾಲೇಜಿನಲ್ಲಿ ಓದಿದ ಈತ, ಮುಂದಿನ ವ್ಯಾಸಂಗವನ್ನು ಮಂಗಳೂರಿನ ಸೈಂಟ್ ಅಲೋಸಿಯಸ್ ಕಾಲೇಜಿನಲ್ಲಿ ಬಿ.ಬಿ.ಎಂ. ಮಾಡುತ್ತಿದ್ದಾನೆ.

ಇವನು ಇನ್ನು ಉತ್ತಮ ಸಾಧನೆ ಮಾಡಲೆಂದು ಜನಾಂಗದ ಪರವಾಗಿ ಕೊಡಗು ಸಂಗಾತಿ ತುಂಬು ಹೃದಯದಿಂದ ಹಾರೈಸಿ, ವಂದನೆಗಳನ್ನು ನೀಡುತ್ತದೆ.

● ವರದಿ : **ಪಿ.ಎಂ.ಪಿ.**

## ಸೇವೆ

ಸೇವೆ ಎಂಬುದೊಂದು ಪವಿತ್ರ ಕಾರ್ಯ. ಪ್ರತಿಯೊಬ್ಬನೂ ನಾನೂ ಸೇವೆ ಮಾಡುತ್ತೇನೆಂದು ಹೇಳಿಕೊಳ್ಳುತ್ತಾನೆ. ರಾಜಕಾರಿಣಿಗಳಂತೂ ತಮ್ಮ ತನು, ಮನ, ಧನ, ಜೀವ, ಸಾವು ಬರೇ ಸೇವೆಗಾಗಿಯೇ ಇದೆಯೆಂದು ಸೇವೆಯನ್ನು ಸದಾ ಸೇವಿಸುತ್ತಲೇ ಇರುತ್ತಾರೆ. ಯೋಗಿಗಳು, ಅರ್ಚಕರು ನಾವು ಸದಾ ಭಗವಂತನ ಸೇವೆಯಲ್ಲಿಯೇ ಇರುವವರೆಂದು ಹೇಳುತ್ತಾರೆ. ನನ್ನಂತವರು ಸೇವೆ ಎಂದರೇನೆಂದು ಹುಡುಕುತ್ತೇವೆ. ಏನೆ ಇರಲಿ ಸೇವೆ ಎಂದರೇನು ? ಒಬ್ಬೊಬ್ಬರಲ್ಲಿ ಒಂದೊಂದು ವಿವರಣೆ ಇದೆ.

ಮಾನವೀಯ ದೃಷ್ಟಿಯಲ್ಲಿ ಸೇವೆ ಎಂದರೆ, ಹೃದಯ ಸ್ಪಂದನ. ಹೇಗೆ ? ಏಕೆ ? ನಾವು ನಿತ್ಯ ಮಾನವ ಶೋಷಿತ ವರ್ಗದವರನ್ನು ಕಾಣುತ್ತೇವೆ. ಖಾಯಿಲಸ್ಥರನ್ನು ಕಾಣುತ್ತೇವೆ. ಇವರೆಲ್ಲ ನಿರಾಶ್ರಿತರು. ಅವರಿಗೆ ಆಶ್ರಯ ಬೇಕು. ಆಶ್ರಯ ಕೊಡಬೇಕೆಂಬ ಹೃದಯ ಸ್ಪಂದನವೇ ಸೇವೆಗೆ ಮೂಲ ಕಾರಣ. ದಿಕ್ಕಿಲ್ಲದವರಿಗೆ ಕಿಂಚಿತ್ ಸಹಾಯವೇ ಸೇವೆ. ಹಣದ ಮದದಿಂದ ನಾವು ದೇವರ ಸೇವೆ ಮಾಡುತ್ತೇವೆಂದು ಹೇಳುತ್ತೇವೆ. ನಮ್ಮ ಸೇವೆ ದೇವರಿಗೇಕೆ ? ಅವನಿಗೆ ಬೇಕಾದಷ್ಟು ಸೇವಕರಿದ್ದಾರೆ. ಚಾಮರ ಬೀಸುವಲ್ಲಿಂದ ಕಾಲೊತ್ತುವರೆಗೆ ಸೇವಕರಿದ್ದಾರೆ. ನಮ್ಮ ಸೇವೆ ಅವನಿಗಗತ್ಯವಿಲ್ಲ. ದೇವರ ದಯೆ, ಸ್ಮರಣೆ, ಅನುಗ್ರಹ ನಮಗೆ ಬೇಕು. ಅದಕ್ಕಾಗಿ ದೀನದಲಿತರಿಗೆ, ನಮ್ಮ ಜನಾಂಗದಲ್ಲಿ ಕಡಿಮೆ ಅಂತಸ್ತಿನವರಿಗೆ ನಮ್ಮ ಸೇವೆ ಬೇಕು. ಅವರನ್ನು ಸದಾ ನಾವು ಸಾಕಲಿಕ್ಕಾಗುವುದಿಲ್ಲ. ಆದರೆ ಅವರನ್ನು ಆತ್ಮತೃಪ್ತಿಯಿಂದ ಬದುಕಲು ಸಹಾಯ ಹಸ್ತನೀಡಬೇಕು ಇದೆ ಸೇವೆ. ಸಮಾಜದಲ್ಲಿ ದೀನ ದಲಿತರ ಸೇವೆ ಮಾಡದ್ದು ಸೇವೆ ಅಲ್ಲ. ಅದು ದೇವರಿಗೆ ತೃಪ್ತಿಯೂ ಇರಲಿಕ್ಕಿಲ್ಲ. ಆದ್ದರಿಂದ ನಮಗೆ ನಮ್ಮ ಸಮಾಜ ಸೇವೆಯೇ ಶ್ರೇಷ್ಠವಾದ ಸೇವೆ. ಮಾನವನಿಗೆ ಮಾನವ ಸಮಾಜ. ಇದರ ಮಟ್ಟಕ್ಕೆ ತಲುಪಬೇಕಾದರೆ ಒಂದು ಜನಾಂಗವಾದ ನಾವು ನಮ್ಮ ಜನಾಂಗದ ಸಮಾಜವನ್ನು ಪೋಷಿಸಬೇಕು. ಜನಾಂಗ ಜನಾಂಗದಲ್ಲಿ ವ್ಯತ್ಯಾಸ, ಉಚ್ಚ, ನೀಚ ಎಂಬ ಭಾವನೆ ಬಿಡಬೇಕು.

ನಮ್ಮ ಜನಾಂಗ ಮಾನವ ಜನಾಂಗ, ಮನುಷ್ಯತ್ವದ ಜನಾಂಗ, ಇದರ ಪಾಲಕ ದೇವನೊಬ್ಬನೆ. ನಾವು ಪಾಲಕರಲ್ಲ, ಸಹಾಯಕರು. ಆದ್ದರಿಂದ ನಾವು ಪಾಲಕರ ಹೆಸರಿನಲ್ಲಿ ಸಮಾಜಕ್ಕೆ ಸಹಾಯಕರಾಗಬೇಕು. ಸಮಾಜ ಸೇವೆಯೆ ಮೋಕ್ಷಕ್ಕೆ ಹೆದ್ದಾರಿ.

○ **ಚೇಂದ್ರಿಮಾಡ ಜಿ. ಮುತ್ತಪ್ಪ**, ಕುಶಾಲನಗರ

# ಆನೆ

**ಭೂ**ಮಿಯ ಮೇಲೆ ಬದುಕಿರುವ ಅತ್ಯಂತ ದೊಡ್ಡ ಪ್ರಾಣಿ ಯಾವುದು ಎಂಬ ಪ್ರಶ್ನೆಗೆ ಯಾರು ಬೇಕಾದರೂ ಕೊಡುವ ಉತ್ತರ 'ಆನೆ'. ಆದರೆ 'ಆನೆಯ ಬಗ್ಗೆ ನೀವೆಷ್ಟು ಬಲ್ಲಿರಿ ?' ಎಂಬ ಉತ್ತರ ಬರೆಸಿ ಮೌಲ್ಯಮಾಪನ ಮಾಡಿದರೆ ಶೇಕಡ ಇಪ್ಪತ್ತೈದಕಿಂತ ಹೆಚ್ಚು ಅಂಕಗಳನ್ನು ಪಡೆಯಬಲ್ಲವರು ತೀರಾ ಕಡಿಮೆ ಎಂದರೆ ತಪ್ಪಾಗಲಾರದು. ಹಿಂದೂ ದೇವರುಗಳಲ್ಲಿ ಅಗ್ರಪೂಜೆಗೆ ಪಾತ್ರನಾಗಿರುವ ಗಣಪತಿಯ ಕುತ್ತಿಗೆಯ ಮೇಲೆ ಆನೆಯಾಗಿದ್ದಾನೆ. ಸ್ವರ್ಗದೊಡೆಯನಾದ ದೇವೇಂದ್ರನ ವಾಹನ ಐದು ದಾಡೆಗಳುಳ್ಳ ಐರಾವತವೆಂಬ ಆನೆ. ದೇವಸ್ಥಾನಗಳಲ್ಲಿ ಆನೆಗಳು ಭಕ್ತರನ್ನು ಆಕರ್ಷಿಸುತ್ತವೆ. ಮೆರವಣಿಗೆಯ ಮುಂದೆ ಆನೆಯೊಂದಿದ್ದರೆ ಅದರ ಶೋಭೆಯೇ ಬೇರೆ. ಹಿಂದೆ ರಾಜಮಹಾರಾಜರು ಆನೆಯ ಮೇಲೆ ಕುಳಿತು ಜಂಬೂ ಸವಾರಿ ಮಾಡುತ್ತಿದ್ದರು. ಮಾನವನು ಬಹಳ ಹಿಂದಿನಿಂದಲೂ ಆನೆಯನ್ನು ಹಿಡಿದು ಪಳಗಿಸಲು ಕಲಿತಿದ್ದು, ಯುದ್ಧಭೂಮಿಯಲ್ಲಿ ಅವುಗಳನ್ನು ಬಳಸಿಕೊಂಡಿದ್ದಾನೆ.ಮಹಾಭಾರತ ಯುದ್ಧದಲ್ಲಿ ಸುಮಾರು 21870 ಆನೆಗಳು ಭಾಗವಹಿಸಿದ್ದವೆಂದು ನಂಬಲಾಗಿದೆ. ಇಂದು ಕೂಡ ನಾವು ಆನೆಗಳನ್ನು ಹಿಡಿದು ಪಳಗಿಸಿ ವಿವಿಧ ಕೆಲಸಗಳಿಗೆ ಬಳಸಿಕೊಳ್ಳುತ್ತಿದ್ದೇವೆ. ಭಾರತದ ಆನೆ ಜಗತ್ತಿನಲ್ಲೆಲ್ಲಾ ಪ್ರಸಿದ್ಧ.

ಚಾರ್ಲ್ಸ್ ಡಾರ್ವಿನನ ಪ್ರಕಾರ ಈ ಪ್ರಪಂಚದಲ್ಲಿರುವ ಜೀವರಾಶಿಗಳು ವಿವಿಧ ಹಂತಗಳಲ್ಲಿ ವಿಕಾಸಹೊಂದಿ ಇಂದಿನ ರೂಪಗಳನ್ನು ತಳೆದಿವೆ. ಆನೆಯೂ ಕೂಡ ಜೀವ ವಿಕಾಸದ ಹಲವು ಹಂತಗಳನ್ನು ದಾಟಿ ಇಂದಿನ ರೂಪವನ್ನು ಪಡೆದಿದೆ. ಸುಮಾರು 2ಕೋಟಿ ವರ್ಷಗಳ ಹಿಂದೆ ಕಿರಿಯ ಗಾತ್ರದ ಆನೆಗಳಿದ್ದವು.ಅವುಗಳನ್ನು 'ಮೋರಿಗಜ' ಎನ್ನುತ್ತಾರೆ. ಮೋರಿಗಜದ ಮುಖವು ಕುದುರೆ ಮುಖವನ್ನು ಹೋಲುತ್ತಿತ್ತು. ಕಿವಿಗಳು ಅಗಲವಾಗಿ ಹಂದಿಯ ಕಿವಿಗಳಂತಿದ್ದವು. ಕೈಕಾಲುಗಳು ಗಿಡ್ಡವಾಗಿ ದಪ್ಪವಾಗಿದ್ದವು. ಹೊಟ್ಟೆ ಡೊಳ್ಳಾಗಿತ್ತು. ಮೋರಿಗಜ ಹೆಚ್ಚುಕಡಿಮೆ ಹಂದಿಯನ್ನೇ ಹೋಲುತ್ತಿತ್ತು.

ಕಾಲ ಕಳೆದಂತೆ ಆನೆಗಳು ವಿಕಾಸ ಹೊಂದತೊಡಗಿದವು. ವಿಕಾಸದ ಹಾದಿಯಲ್ಲಿ ಕೆಲವು ವಿಧದ ಆನೆಗಳು ಮರೆಯಾಗಿ ಹೋದವು.'ಮ್ಯಾಮತ್'ಎಂಬುದು ಇಂದಿನ ಆನೆಯ ಪೂರ್ವಜ. ಇದು ಇತಿಹಾಸ ಪೂರ್ವಕಾಲದಲ್ಲಿ ಜೀವಿಸಿತ್ತು. 16 ಅಡಿಗಳಷ್ಟು ಉದ್ದದ ಕೊಂಬುಗಳು [ದಂತಗಳು] ಇದಕ್ಕಿತ್ತು. ಪ್ರಪಂಚದ ಬೇರೆ ಬೇರೆ ಕಡೆಗಳಲ್ಲಿ ಮ್ಯಾಮತ್‌ಗಳು ಜೀವಿಸಿದ್ದವು. ಯುರೋಪ್, ಸೈಬೀರಿಯಾ ಮೊದಲಾದ ಕಡೆಗಳಲ್ಲಿದ್ದ ಮ್ಯಾಮತ್‌ಗೆ ಮೈತುಂಬಾ ತುಪ್ಪಳದಂತ ಕೂದಲು ಇತ್ತು. ಆದರೆ ಏಷ್ಯಾ, ಆಫ್ರಿಕ ಮತ್ತು ಅಮೇರಿಕದ ಕಡೆಗಳಲ್ಲಿದ್ದ ಮ್ಯಾಮತ್‌ಗೆ ಮೈಮೇಲೆ ಕೂದಲುಗಳಿರಲಿಲ್ಲ. ಸೈಬೀರಿಯದ ಹಿಮರಾಶಿಯ ಅಡಿಯಲ್ಲಿ ದೊರೆತ ಮ್ಯಾಮತ್ ಆನೆಯೊಂದನ್ನು ರಷ್ಯಾದಲ್ಲಿ ಇಂದಿಗೂ ಸುರಕ್ಷಿತವಾಗಿಡಲಾಗಿದೆ.

ಪೂರ್ಣ ಪ್ರಮಾಣದಲ್ಲಿ ಬೆಳವಣಿಗೆ ಹೊಂದಿದ ಇಂದಿನ ಆನೆ ಗರಿಷ್ಠ 4 ಮೀಟರ್ ಎತ್ತರವಿರುತ್ತದೆ ಮತ್ತು ಗರಿಷ್ಠ 7 ಟನ್ ತೂಕವಿರುತ್ತದೆ. ಇದರ ದೇಹದ ಉಷ್ಣಾಂಶ 36.6 ಸೆಂಟಿಗ್ರೇಡ್.ಮೇಲ್ದವಡೆಯ ಎರಡು ಹಲ್ಲುಗಳು ಮಾರ್ಪಾಡುಹೊಂದಿ ದಂತಗಳಾಗುತ್ತವೆ. ಸರಿಯಾಗಿ ಬೆಳೆದ ಒಂದು ದಂತದ ತೂಕ ಗರಿಷ್ಠ 200 ಪೌಂಡ್‌ಗಳು. ಆಫ್ರೀಕದ ಆನೆಗಳ ದಂತಗಳು ಬಿಳಿಯಾಗಿದ್ದು ಉತ್ತಮ ಗುಣಮಟ್ಟದವುಗಳಾಗಿವೆ. ನಮ್ಮ ದೇಶದಲ್ಲಿ ಗಂಡಾನೆಗಳಿಗೆ ಮಾತ್ರ ದಂತಗಳಿರುತ್ತವೆ. ಆಫ್ರೀಕದಲ್ಲಿ ಹೆಣ್ಣಾನೆಗಳಿಗೂ ದಂತಗಳಿರುತ್ತವೆ. ಆದರೆ ಇವು ಗಂಡಾನೆಗಳ ದಂತಗಳಿಗಿಂತಲೂ ಚಿಕ್ಕದಾಗಿರುತ್ತವೆ.

ಆನೆ ತುಂಬ ಬುದ್ಧಿವಂತ ಪ್ರಾಣಿ. ಸರ್ಕಸ್ಸಿನಲ್ಲಿ ಇದು ವಿವಿಧ ರೀತಿಯ ಆಟಗಳನ್ನು ಪ್ರದರ್ಶಿಸಬಲ್ಲುದು. ಇತ್ತೀಚೆಗೆ ಉದಯ ಟಿ.ವಿ. ಯವರು ಸೊಂಡಿಲನ್ನು ಉಪಯೋಗಿಸಿ ಚಿತ್ರ ಬಿಡಿಸುವ ಆನೆಯನ್ನು ಪರಿಚಯಿಸಿರುವುದನ್ನು ನೆನಪಿಸಿಕೊಳ್ಳಬಹುದು. ಆನೆಗೆ ಒಳ್ಳೆಯ ಜ್ಞಾಪಕಶಕ್ತಿ ಕೂಡ ಇರುತ್ತದೆ. ಕಾಡಿನಲ್ಲಿರುವ ಆನೆಗಳು ನಾಗರಹಾವು ಮತ್ತು ಹೆಬ್ಬಾವುಗಳನ್ನು ಕಂಡರೆ ಅವುಗಳನ್ನು ತುಳಿದು ನುಜ್ಜುಗುಜ್ಜು ಮಾಡುತ್ತವೆ. ಕಡಿದಾದ ಇಳಿಜಾರು ಪ್ರದೇಶಗಳಲ್ಲಿ ಇಳಿಯುವಾಗ ಆಯತಪ್ಪದಂತೆ ಗಿಡವನ್ನು ಮುರಿದು ದೊಣ್ಣೆಯಂತೆ ಸೊಂಡಿಲಿನಲ್ಲಿ ಹಿಡಿದು ಅದನ್ನು ಊರಿಕೊಂಡು ಇಳಿಯುತ್ತದೆ. ಹಲಸಿನ ಹಣ್ಣು ಮರದ ತುದಿ ಭಾಗದಲ್ಲಿದ್ದರೂ ದೊಣ್ಣೆ ಮುರಿದು ಬಡಿಗೆ ಬೀಸಿ ಅವುಗಳನ್ನು ಬೀಳಿಸಿ ತಿನ್ನುತ್ತವೆ.ಹೀಗೆ ಮನುಷ್ಯನಂತೆ ಬುದ್ಧಿ ಉಪಯೋಗಿಸಿ ಅವುಗಳು ಇನ್ನೆಷ್ಟೋ ಕೆಲಸಗಳನ್ನು ಮಾಡುತ್ತವೆ. ಸ್ವತಂತ್ರವಾಗಿ ಕಾಡಿನಲ್ಲಿದ್ದರೆ 80 ವರ್ಷಗಳವರೆಗೂ ಬದುಕಬಲ್ಲವು.

ಸೊಂಡಿಲು ಆನೆಗೆ ಮಾತ್ರ ಇರುವ ಒಂದು ವಿಶಿಷ್ಟಅಂಗ. ಚೆನ್ನಾಗಿ ಬಳುಕಬಲ್ಲ ಸೊಂಡಿಲೇ ಅದರ ಮೂಗು. ಇದರ ತುತ್ತತುದಿಯಲ್ಲಿ ಮೂಗಿನ ಹೊಳ್ಳೆಗಳಿವೆ.ಸೊಂಡಿಲು ತುಂಬಾ ಸೂಕ್ಷ್ಮವಾದ ಅಂಗ. ಸಂಪೂರ್ಣ ಮಾನವನ ದೇಹದಲ್ಲಿರುವುದಕ್ಕಿಂತಲೂ ಹೆಚ್ಚು ಮಾಂಸಖಂಡಗಳು ಆನೆಯ ಸೊಂಡಿಲಿನಲ್ಲಿವೆ ಎಂದು ನಂಬಲಾಗಿದೆ. ನೀರು ಮತ್ತು ಆಹಾರವನ್ನು ಬಾಯಿಗೆ ಕೊಂಡೊಯ್ಯುವುದರ ಜೊತೆಗೆ ಸೊಂಡಿಲಿನಿಂದ ಆನೆಯು ಮಾಡಲಾರದ

ಕೆಲಸವೇ ಇಲ್ಲ.

ಆನೆಗೆ ದೊಡ್ಡದಂತಗಳಿವೆ. ಆದರೆ ಎರಡು ದವಡೆಗಳಲ್ಲೂ ದವಡೆ ಹಲ್ಲುಗಳಿಲ್ಲ.ಆನೆ ಮರಿಯಾಗಿದ್ದಾಗ ಮೃದುವಾದ ಹಾಲು ಕೋರೆ [ದಾಡೆ] ಗಳಿರುತ್ತವೆ. ಆದರೆ ಇವು ಸಣ್ಣ ಪ್ರಾಯದಲ್ಲಿ ಉದುರಿ ಹೋಗುತ್ತವೆ. ದಂತಗಳಾಗಿ ಮಾರ್ಪಾಡು ಹೊಂದಿದ ಮೇಲ್ದವಡೆಯ ಎರಡು ಹಲ್ಲುಗಳು ಅವರ ಜೀವನ ಪರ್ಯಂತ ಬೆಳೆಯುತ್ತಲೇ ಇರುತ್ತವೆ. ಮೊದಮೊದಲು ದಂತಗಳ ಮೇಲ್ಭಾಗದಲ್ಲಿ ಗಾಜಿನಂತಹ ಲೇಪನವಿರುತ್ತದೆ. ಆದರೆ ಪ್ರಾಯಹೋದಂತೆ ಅದು ಮಾಯವಾಗಿ ಕೇವಲ ದಂತಗಳು ಮಾತ್ರ ಉಳಿದಿರುತ್ತವೆ.

ಆನೆಯ ತಲೆ ಅವರ ದೇಹಕ್ಕೆ ಅನುಗುಣವಲ್ಲದಷ್ಟು ದೊಡ್ಡದಾಗಿರುತ್ತದೆ. ಕಿವಿಗಳು ಮೊರದಂತೆ ಅಗಲವಾಗಿವೆ.ಆದರೆ ಕಣ್ಣುಗಳು ಮಾತ್ರ ಚಿಕ್ಕವು. ಕುತ್ತಿಗೆ ತುಂಬ ಗಿಡ್ಡವಾಗಿದ್ದು, ದಪ್ಪವಾಗಿರುತ್ತದೆ.ಕೈಕಾಲುಗಳು ಉದ್ದವಾಗಿದ್ದು ನೇರವಾಗಿರುತ್ತವೆ. ಪಾದಗಳು ಚಿಕ್ಕವಾಗಿದ್ದು ಅಗಲವಾಗಿರುತ್ತವೆ. ಪಾದಗಳಲ್ಲಿ ಐದು ಬೆರಳುಗಳಂತಹ ಭಾಗಗಳನ್ನು ಕಾಣಬಹುದು. ಇವುಗಳಲ್ಲಿ ಮಧ್ಯದ್ದು ಉಳಿದವುಗಳಿಗಿಂತ ಉದ್ದವಾಗಿರುತ್ತದೆ. ತನ್ನ ಹಿಂಗಾಲುಗಳನ್ನು ಮನುಷ್ಯ ಮಡಚುವಂತೆ ಮಡುಚಬಲ್ಲ ಏಕೈಕ ಪ್ರಾಣಿ ಆನೆ ಮಾತ್ರ.

ನಮ್ಮ ದೇಶದ ಆನೆಗಳಿಗೂ ಆಫ್ರಿಕದಆನೆಗಳಿಗೂ ವ್ಯತ್ಯಾಸಗಳಿವೆ. ಆಫ್ರಿಕದ ಆನೆಗಳು ಕುಳ್ಳಗಿರುತ್ತವೆ. ಕಿವಿಗಳು ತುಂಬಾ ಅಗಲವಾಗಿದ್ದು ವಿಶ್ರಾಂತಿಯ ಸಮಯದಲ್ಲಿ ಅವುಗಳು ಹೆಗಲನ್ನು ಸಂಪೂರ್ಣ ಮುಚ್ಚುತ್ತವೆ.ಹಣೆ ಗುಂಡಾಗಿದ್ದು ಇಳಿಜಾರಾಗಿರುತ್ತದೆ. ಮೈ ಕಪ್ಪು ಮಿಶ್ರಿತ ಬೂದು ಬಣ್ಣದಿಂದ ಕೂಡಿರುತ್ತದೆ. ಸ್ವಭಾವದಲ್ಲಿ ಆಫ್ರಿಕದ ಆನೆಗಳು ಭಾರತದ ಆನೆಗಳಿಗಿಂತಲೂ ಕ್ರೂರ.ಭಾರತದ ಆನೆಗಳ ಮೈಬಣ್ಣ ಮಾಸಲು ಕಪ್ಪು. ಥೈಲ್ಯಾಂಡ್ ಮತ್ತು ಬರ್ಮಾಗಳಲ್ಲಿ ನಸುಬೂದು ಮೈಬಣ್ಣದ ಆನೆಗಳಿವೆ. ಇವುಗಳನ್ನು ಬಿಳಿ ಆನೆಗಳನ್ನುತ್ತಾರೆ.

ಆನೆ ಸಸ್ತನಿಗಳ ಗುಂಪಿಗೆ ಸೇರಿದ ಸಸ್ಯಾಹಾರಿ ಪ್ರಾಣಿ. ಇದರ ಗರ್ಭಾವಸ್ಥೆಯ ಅವಧಿ 645 ದಿನಗಳು.ಇದು ಸಂಘಜೀವಿ. ಒಂದೇ ಗುಂಪಿನಲ್ಲಿ 30 ರಿಂದ 50ರ ವರೆಗೆ ಆನೆಗಳಿದ್ದು ಎಲ್ಲವೂ ಒಂದೇ ಕುಟುಂಬಕ್ಕೆ ಸೇರಿರುತ್ತವೆ. ಕಾಡಿನಲ್ಲಿ ಬೇರುಗಳನ್ನು, ಟೊಂಗೆಗಳನ್ನು, ಎಲೆಗಳನ್ನು ತಿಂದು ಬದುಕುತ್ತವೆ. ಬಗನಿ ಮರಗಳನ್ನು ಬೀಳಿಸಿ, ಸೀಳಿ ಒಳಗಿನ ತಿರುಳನ್ನು ತಿನ್ನುತ್ತವೆ. ಈ ಮರದ ಎಲೆಗಳೂ ಅವುಗಳಿಗೆ ಬಹಳ ಇಷ್ಟ. ಸಿಂಹ ಮತ್ತು ಹುಲಿಗಳಿಗೆ ಮಾತ್ರ ಹೆದರುವ ಆನೆಗಳಿಗೆ ಮನುಷ್ಯನಲ್ಲದೆ ಬೇರೆ ಶತ್ರುಗಳಿಲ್ಲ ಎನ್ನಬಹುದು.

ಕೆಸರಿನಲ್ಲಿ ಹೊರಳಾಡುವುದು, ನೀರಾಟ ಆಡುವುದು ಆನೆಗೆ ತುಂಬಾ ಇಷ್ಟ. ಸ್ವಲ್ಪ ನೀರು ಸಿಕ್ಕಿದರೂ ಸೊಂಡಿಲಿನಿಂದ ಹೀರಿ ಮೈಮೇಲೆ ಚಿಲ್ಲಿಕೊಂಡು ಮೈ ತೊಳೆದುಕೊಳ್ಳುತ್ತದೆ. ಸಾಕಿದ ಆನೆಗೆ ದಿನನಿತ್ಯ ಚೆನ್ನಾಗಿ ಸ್ನಾನ ಮಾಡಿಸದಿದ್ದರೆ ಅದು ಕೋಪಗೊಳ್ಳುತ್ತದೆ.ದೇಹವು ತಂಪಾಗಿರಬೇಕೆಂದು ಆನೆ ತುಂಬಾ ಇಚ್ಚಿಸುತ್ತದೆ. ಆದಕಾರಣ ನೆರಳಿನಿಂದ ಕೂಡಿದ ದಟ್ಟಾರಣ್ಯಗಳಲ್ಲಿ, ನದಿ ಮತ್ತು ಸರೋವರಗಳ ದಡಗಳಲ್ಲಿ ಆನೆಗಳು ಹೆಚ್ಚಾಗಿ ವಾಸಮಾಡುತ್ತವೆ. ಆನೆ ಒಳ್ಳೆಯ ಈಜುಗಾರ ಪ್ರಾಣಿಯೂ ಹೌದು.

ಗಂಡಾನೆಗಳಿಗೆ ಮದವೇರುತ್ತದೆ. ಆಗ ಅದರ ಕಣ್ಣುಗಳ ಮಧ್ಯೆ ನೆತ್ತಿಯಲ್ಲಿ ಒಂದು ವಿಧವಾದ ಎಣ್ಣೆಯಂತಹ ದ್ರವ ಒಸರುತ್ತದೆ. ಇದು ಜೇನಿನಂತೆ ಜಿಗುಟಾಗಿರುತ್ತದೆ. ಇವಕ್ಕೆ ಒಂದು ಬಗೆಯ ಸುವಾಸನೆಯೂ ಇರುವುದರಿಂದ ದುಂಬಿಗಳು ಮದ ಬಂದ ಆನೆಯ ತಲೆಯ ಸುತ್ತಲೂ ಹಾರಾಡುತ್ತಿರುತ್ತವೆ. ಮದವೇರಿದ ಸಮಯದಲ್ಲಿ ಆನೆಯು ತುಂಬಾ ಆವೇಶದಲ್ಲಿರುವುದರಿಂದ, ಅದು ತುಂಬಾ ಅಪಾಯಕಾರಿಯಾಗಿರುತ್ತದೆ. ಆನೆಯು ಕೋಪಗೊಂಡಾಗ ಭಯಂಕರವಾಗಿ ಘೀಳಿಡುತ್ತದೆ.

ಗಜರಾಜನೆಂಬ ಬಿರುದಿಗೆ ಪಾತ್ರವಾದ ಪ್ರಾಣಿ ಆನೆಯಾದರೂ, ರೋಗಗಳು ಅದನ್ನು ಬಿಡಲಾರವು. ನೆರಡಿರೋಗ, ನೆತ್ತರನಂಜು,ಟ್ರಪನೋಸೊಮಿಯಾಸಿಸ್,ಕಾಲುಬಾಯಿರೋಗ, ಆನೆ ಸಿಡುಬುರೋಗ ಮೊದಲಾದವುಗಳು ಆನೆಗಳನ್ನು ಸತಾಯಿಸುತ್ತವೆ.

ಆನೆಯ ದಂತದ ಮಾರಾಟವನ್ನು ಇಂದು ಹೆಚ್ಚಿನ ದೇಶಗಳು ನಿಷೇದಿಸಿವೆ. ಆದರೂ ದಂತದ ಆಸೆಗಾಗಿ ನಿರುಪದ್ರವಿ ಆನೆಗಳನ್ನು ಅಮಾನುಷವಾಗಿ ಕೊಲ್ಲುತ್ತಿರುವ ಮಾನವ ಎಂತಹ ಕ್ರೂರಿಯಲ್ಲವೇ ? ವನ್ಯಜೀವಿ ಕಾಯ್ದೆಯಲ್ಲಿ 'ಆನೆ ಸಂರಕ್ಷಿತ ಪ್ರಾಣಿ' ಎಂದು ಪರಿಗಣಿಸಿರುವುದು ಮಾತ್ರ ಅದರ ರಕ್ಷಣೆ ಮಾಡಬಲ್ಲುದೇ ? ಯೋಚಿಸಬೇಕಾದ ವಿಚಾರ.

○ **ಬೈತಡ್ಕ ಹೇಮಾ ಕುಂಜಪ್ಪ**, ಪಾಲೂರು

## ಒಗಟು

1. ಇರುವುದು ಗೋಳಾಕಾರ, ಬಾಯಿ ವೃತ್ತಾಕಾರ, ಬಡಿದರೆ ಬದುಕುವುದಿಲ್ಲ, ಸುಟ್ಟರೆ ಸಾಯುವುದಿಲ್ಲ ಇದು ಏನು ?
2. ಆರು ಕಾಲು ಅಪ್ಪಣ್ಣ, ಉದ್ದ ಮೀಸೆ ತಿರುವಣ್ಣ, ಅಲ್ಲಿಂದಿಲ್ಲಿಗೆ ಹಾರಣ್ಣ ಇದು ಏನು ?

ಉತ್ತರ : 1. ಗಡಿಗೆ 2. ಜಿರಳೆ

**ಪೊನ್ನೇಟ ಜಯಂತಿ ಪೂವಯ್ಯ**, ಟೀ ನರಸೀಪುರ

# ನನ್ನ ಹವ್ಯಾಸ

**ನಾ**ನೊಬ್ಬ ರಾತ್ರಿಯನ್ನು ಹೆಚ್ಚಾಗಿ ಪ್ರೀತಿಸುವ ವ್ಯಕ್ತಿ. ರಾತ್ರಿ ಅಲ್ಲಿ ಇಲ್ಲಿ ಸುತ್ತವುದು, ರಾತ್ರಿ ಬೇಟೆಗೆ ಹೋಗುವುದು, ಬೆಳಂದಿಗಳಲ್ಲಿ ಮೋಡ, ಚಂದ್ರರ ಹೊಡೆದಾಟವನ್ನು ನೋಡಿ ಆನಂದಿಸುವುದು ನನ್ನ ಹವ್ಯಾಸ. ಆದರೇ ರಾತ್ರಿ ದೆವ್ವಗಳಿರುತ್ತವೆ, ಹೆದರಿಸುತ್ತದೆ, ಶಬ್ಧ ಮಾಡುತ್ತದೆ ಅಂತ ಜನ ಹೇಳುತ್ತ ಇದ್ರು. ನನಗೆ ಮಾತ್ರ ಕಾಣ ಸಿಗಲಿಲ್ಲ. ಸುತ್ತ ಮುತ್ತ ಎಲ್ಲಾ ಮರೂ, ಯಾರಾದರೂ ಸತ್ತರೆ ನನ್ನ ಅಮ್ಮ ನನಗೆ"ಬೇಗ ಬಾರೊ ರಾತ್ರಿ ಆಗುವ ಮೊದಲು ಮನೆ ಸೇರಿದ್ರೆ ಸರಿ" ಎನ್ನುವುದು ಮಾಮೂಲು, ಆದರೆ ನಾನು ಮನೆ ಸೇರುವುದು ಮಾತ್ರ ರಾತ್ರಿನೆ. ನಾನು ಹಾಗೆ ಮಾಡುವುದು ಅಮ್ಮನ ಮಾತು ಮೀರಿ ಅಲ್ಲಾ ದೆವ್ವದ ಅನ್ವೇಷಣೆಗಾಗಿ.

ಒಂದು ದಿನ ರಾತ್ರಿ ಮನೆ ಕಡೆ ಬರುತ್ತಿದ್ದೆ. ಆಗ ನನ್ನ ಮನಸ್ಸು ದೆವ್ವದ ಕಡೆ ಯೋಚಿಸುತ್ತಿರಲಿಲ್ಲ. ಬೇರೆಲ್ಲೊ ಹೋಗಿತ್ತು. ನನ್ನಿಂದ ಒಂದು ಹತ್ತು ಮೀಟರಿನಷ್ಟು ದೂರದಲ್ಲಿ ಒಂದು ಬಿಳಿ ಆಕೃತಿ ವಿಚಿತ್ರ ಶಬ್ಧ ಮಾಡುತ್ತ ನನ್ನೆಡೆಗೆ ಧಾವಿಸಿ ಬಂತು. ನನಗೇನು ಮಾಡಬೇಕೆಂದೆ ತೋಚಲಿಲ್ಲ. ಧೈರ್ಯ ನಮಗೆ ಅಪತ್ಕಾಲದಲ್ಲಿ ಸಹಾಯಕ್ಕೆ ಬರುವ ವಸ್ತು ಎಂಬ ಧ್ಯೇಯದವನಾಗಿದ್ದರಿಂದ ಬಲಗಾಲಿನಿಂದ ಆ ಆಕೃತಿಯ ಕಡೆಗೆ ಜಾಡಿಸಿ ಒದ್ದೆ. ಕಯಾಂಕ್ ಎಂದು ಆ ಬಿಳಿಯ ಆಕೃತಿ ರಸ್ತೆಯಿಂದ ಕಾಡಿನೊಳಗೆ ಕಿರುಚುತ್ತಾ ಓಡಿತು. ಅದೊಂದು ಬಿಳಿಯ ಬಣ್ಣದ ನಾಯಿ. ನನಗಾಗ ತಿಳಿಯಿತು ಆ ನಾಯಿ ನನ್ನ ನೋಡಿ ಹೆದರಿ ವಿಚಿತ್ರವಾಗಿ ಕಿರುಚಿತ್ತೆಂದು.

ನಾನೊಂದು ದಿನ ಹಿರಿಯರೊಬ್ಬರೊಡನೆ ಕುಳಿತು ಮಾತನಾಡುತ್ತಿದ್ದೆ. ಒಂದು ಮರಕುಟುಕ ಪಕ್ಷಿ "ಮೀ ಮೀ" ಎಂದು ಕೂಗುತ್ತಿತ್ತು. ಆಗ ಆ ಹಿರಿಯ ಹೇಳಿದರು, ಈ ದಿನ ಯಾರಾದ್ರು ಸತ್ತ ಸುದ್ಧಿಬರುತ್ತದೆಂದು. ಆದರೆ ಅದು ನಿಜವೋ ಕಾಕತಾಳಿಯವೋ ತಿಳಿಯದು. ಅದಿನ ಸಂಬಂಧಿಯೊಬ್ಬರು ತೀರಿಕೊಂಡ ವಿಷಯ ತಿಳಿಯಿತು. ಆ ಹಿರಿಯ ಹೇಳಿದ ಮಾತು ನಿಜವಾಯಿತು. ನಾನು ಮುಂದೆ ಆ ಪಕ್ಷಿ "ಮೀ ಮೀ" ಎಂದು ಕೂಗಿದಾಗ ಸಾವಿನ ಸುದ್ಧಿಯನ್ನು ನಿರೀಕ್ಷಿಸುತ್ತಿದ್ದೆ. ಆದರೆಸುದ್ಧಿ ಬರುತ್ತಲೇ ಇರಲಿಲ್ಲ. ಆಶ್ಚರ್ಯದಿಂದ ಈ ವಿಷಯಕ್ಕೆ ಉತ್ತರ ಹುಡುಕಲು ನನ್ನ ದೊಡ್ಡಪ್ಪನ ಮಗ ರಂಜಿತ್‌ನ ಹತ್ತಿರ ಹೋದೆ ಆತ ಯಾವುದೇ ವಿಷಯದ ಬಗ್ಗೆ ಪ್ರಶ್ನೆ ಕೇಳಿದರೆ ಸಮಾಧಾನ ಕರವಾದ ಉತ್ತರ ಕೊಡುತ್ತಿದ್ದ. "ರಂಜಿಯಣ್ಣಾ ಮರಕುಟುಕ "ಮೀಮೀ"ಂತಾ ಕೂಗಿದ್ರೆ ಸಾವು ಸುದ್ಧಿ ಬರುತ್ತದಂತೆ. ನಿಜನಾ ಎಂದೆ. ಇಲ್ಲ, ಯಾವ ವ್ಯಕ್ತಿಯ ಆಯುಷ್ಯ ಮುಗಿಯಿತೋ ಅವನು ಸಾಯುತ್ತಾನೆ. ಪಕ್ಷಿದು ಹೊಟ್ಟೆ ತುಂಬಿದ್ರೆ ಕೂಗುತ್ತೆ. ಆ ವ್ಯಕ್ತಿಯ ಸಾವಿಗೂ ಪಕ್ಷಿ ಕೂಗಿದಕ್ಕೂ ಯಾವ ಸಂಬಂಧ ವಿಲ್ಲಾ. ನನಗೂ ಆಗ ಆ ಮಾತು ನಿಜ ಅನಿಸಿತು.

ಒಂದು ರಾತ್ರಿ ಮನೆ ಕಡೆ ಬರುತ್ತಿದ್ದಾಗ ಒಂದು ಮರದ ಬುಡದಲ್ಲಿ ಒಂದು ಮಾನವಕೃತಿ ಕುಳಿತಿರುವಂತೆ ಅಸ್ಪಷ್ಟವಾಗಿ ಕಾಣಿಸುತ್ತಿತ್ತು. ನನ್ನ ನೆರೆ ಮನೆಯಾತ ಬೇಟೆಯಾಡಲು ಕಾಡು ಪ್ರಾಣಿಗಳಿಗೆ ಹೊಂಚು ಹಾಕಿ ಕುಳಿತಿದ್ದಾನೆಂದು ತಿಳಿದು ಆತನ ಹೆಸರೇಳಿ ಕರೆದೆ.ಆ ಕಡೆಯಿಂದ ಉತ್ತರವಿರಲಿಲ್ಲ. ಎರಡು ಮೂರು ಬಾರಿ ಕರೆದೆ. ಆ ಕಡೆಯಿಂದ ಉತ್ತರವಿರಲಿಲ್ಲ. ಸಿಟ್ಟಿನಿಂದ ಆ ಆಕೃತಿಗೆ ಒದ್ದೆ. ಆ ಆಕೃತಿ ಅಲ್ಲಿಂದ ಉರುಳಿ ಒಂದು ಹತ್ತು ಅಡಿ ದೂರದಲ್ಲಿ ತಟಸ್ಥವಾಯಿತು. ಆ ಆಕೃತಿಗೆ ನೋವಾಯಿತೊ ಏನೊ, ನನಗಂತು ನಗು ಬಂತು. ಕಾರಣ ನನ್ನ ಅಮ್ಮ ಕೊಟ್ಟಿಗೆಗೆ ಹಾಕಲು ತರಗೆಲೆಗಳನ್ನು ತುಂಬಿದ ಗೋಣಿಚೀಲವಾಗಿತ್ತು.

ಮತ್ತೊಂದು ದಿನ ರಾತ್ರಿ ಕಾಡಿನ ಮಧ್ಯದಿಂದ ಟಾರ್ಚ್ ಬೆಳಕು ಪ್ರಕಾಶಿಸುತ್ತಿತ್ತು. ಇದು ಪಕ್ಕದ ಮನೆಯ ಹುಡುಗನ ಕೆಲಸ. ಕಾಡುಬೆಕ್ಕುಹುಡುಕುತಿದ್ದಾನೆ ಬೇಟೆ ಮಾಡಲು ಎಂದು ತಿಳಿದು "ಯಾರದು" ಎಂದೆ "ನಾನು" ಎಂಬ ಸ್ವರ ತೇಲಿ ಬಂತು. ಆದರೆ ಯಾರ ಗಂಟಲಿನಿಂದ ತೇಲಿ ಬಂದ ಸ್ವರವೆಂದು ತಿಳಿಯಲಿಲ್ಲ. ಪಕ್ಕದ ಮನೆ ಹುಡುಗನೆ ಆಗಿರಬೇಕೆಂದು "ಏನೋ ಬೇಟೆ ಆಗಿಲ್ವೇನೋ" ಎಂದೆ. "ಇಲ್ಲಾ" ಎಂಬ ಗಡಸು ಸ್ವರ ಆ ಕಡೆಯಿಂದ ತೇಲಿ ಬಂದಾಗ ಬೆಚ್ಚಿ ಬಿದ್ದೆ. ಕಾರಣ ಆ ಸ್ವರ ನನ್ನ ಚಿಕ್ಕಪ್ಪನದಾಗಿತ್ತು.

ನನಗೆ ಸಿಗರೇಟ್ ಸೇದುವ ಅಭ್ಯಾಸ. ಬೇರೆಯವರ ದೃಷ್ಠಿಯಲ್ಲದು ದುರಭ್ಯಾಸ. ನಾನು ಮನೆ ಹಿಂಬದಿ ಹೋಗಿ ಬಂದರೆ ಸಾಕು. ಅಮ್ಮ ಬೈಯ್ಯಲು ಶುರು ಮಾಡುತ್ತಾರೆ. ಬೀಡಿ ವಾಸನೆ ಹೊಡಿತದಂತಾ. ಆದರೆ ನಾನಾಗ ಬೀಡಿ ಎಳೆದೇ ಇರುವುದಿಲ್ಲ. ಒಂದೊಂದು ಸಲ ಅಮ್ಮನ ಮುಂದೆ ಎಳೆದುಬಿಡಬೇಕೆನಿಸುತ್ತದೆ. ಆದರೆ ಧೈರ್ಯ ಬರುವುದಿಲ್ಲ. ನಾನು ಅಮ್ಮನ ಮುಂದೆ ಹಾಗೂ ಕೆಲವು ಹಿರಿಯರ ಮುಂದೆ "ನೋ ಸ್ಮೋಕಿಂಗ್" ಗೆಳೆಯರ, ಕಿರಿಯರ, ಸಮಕಾಲೀನರ ಹಾಗೂ ಹಿರಿಯರಾದರೂ ಗೆಳೆಯರ ರೀತಿ ಇರುವವರ ಮುಂದೆ "ಚೈನ್ ಸ್ಮೋಕರ್" ಒಂದು ದಿನ ನಾಲ್ಕೈದು ಹಿರಿಯರು ಕುಳಿತು ಹರಟೆ ಹೊಡಿತಾ ಇದ್ದರು. ನಾನು ಅಲ್ಲಿದ್ದೆ. ಸ್ವಲ್ಪ ಸಮಯದ ನಂತರ ನಾನಲ್ಲಿಂದ ಎದ್ದು ಹೊರ ಹೋದೆ.

(12ನೇ ಪುಟ ನೋಡಿ)

## ವೈರಿಗಳ ಕಾದಾಟ

ಹಿಂದೆ ನಡೆದೊಂದು ಕಥೆ ಇಂದೀಗ ನೆನೆಯುತ್ತಿರೆ
ಎನ್ನೊಡಲು ನಡುಗುತಿದೆ ಅಡಿಗಡಿಗೆ ಹೆದರಿ
ನಮ್ಮನೆಯ ಪೂರ್ವಕ್ಕೆ ಬೆಳೆದಿರುವ ಬೆಟ್ಟವದು
ಕಾಣುವುದು ಕತ್ತಲೆಯು ಕವಿದಂತೆ ಚದರಿ ॥

ಅಂದೊಮ್ಮೆ ಕೊಟ್ಟಿಗೆಗೆ ಬಂದಿಲ್ಲ ಹಸುವೆನುತ
ಅರಸುತಲಿ ಹೋದನಾ ಆ ವನದ ಒಳಗೆ ।
ಹಬ್ಬಿದಾವನದಲ್ಲಿ ಒಬ್ಬನೆ ಬರುತಿರಲು
ಕಂಡ ನೋಟವು ಮನದಿ ದೃಢವಾಗಿದೆ ॥

ಕಾಳ ಸರ್ಪವು ಒಂದು ಯಾವುದಕೊ ಭಯಗೊಂಡು
ಹೆಡೆ ಬಿಚ್ಚಿ ನಿಂತಿತ್ತು ಅಲುಗಾಡದೆ ।
ಹಬ್ಬಿರುವ ಹುತ್ತವನು ತಬ್ಬಿಹುದು ಹಾವೊಂದು
ನಿಂತು ನೋಡಿದೆ ಅದಕೆ ಗೋಚರಿಸದೆ ॥

ಕಾಳ ಸರ್ಪವು ಹೌದು ನೀಳವಾಗಿದೆ ಬೆಳೆದು ।
ನಾಳದಲಿ ಕಾಣುತಿದೆ ಏನೊಂದೊ ಹೊಳೆದು ॥
ನೀಲ ಬಣ್ಣದ ಉದ್ದ ನಾಲಗೆಯ ನಡುಗಿಸುತ ।
ಕಾಳಗಕ್ಕೆ ಕಾಯುತಿದೆ ಯಾವುದನೊ ಕರೆದು ॥

ಆರಡಿಯ ದೂರದಲಿ ಸಾರುತಿದೆ ಮುಂಗುಸಿಯು ।
ಮಾರುದ್ದ ಬೆಳೆದಿರುವ ಕಾಳನನು ಕಂಡು ।
ಹಂಗಿಸುತಲಿತ್ತದಕೆ ಮುಂಗುಸಿಯೆ ಮೊದಲಾಗಿ ।
ಮೇಲುಕೀಳಿಬ್ಬರಲಿ ಯಾರಿಹರು ಎಂದು ।

ವಿಾರಿದುತ್ಸಾಹದಿಂದ ಮುಂಗುಸಿಯು ಸಾರುತಿರೆ
ಕಚ್ಚಿತಾ ಹಾವಲ್ಲಿ ಮುಂಗುಸಿಯ ತಲೆಗೆ ।
ಕೆಚ್ಚೆದೆಯ ಮುಂಗುಸಿಯು ಎಚ್ಚರದಿ ತಪ್ಪಿಸುತ
ಕಚ್ಚಿತಾ ಹಾವಿನಾ ಬಿಚ್ಚಿದಾ ಹೆಡೆಗೆ ॥

ಮುಂಗುಸಿಯು ಮೇಲಾಗಿ ಹಾವಲ್ಲಿ ಕೆಳಗಾಗಿ
ಸುತ್ತಿಕೊಂಡಿತು ಹಾವು ಮುಂಗುಸಿಯ ಮೈಗೆ ।
ಎಂಟತ್ತು ನಿಮಿಷಗಳು ಕಾದಾಟವಾಡುತಲಿ
ಕೊಂದಿತಾ ಮುಂಗುಸಿಯು ಹಾವನ್ನು ಕೊನೆಗೆ ॥

ಹಾವು ಮುಂಗುಸಿಗಂದು ಆದ ಸೆಣಸಾಟವನು
ಎಂದಿಗೂ ಮರೆಯೆನಾ ಈ ಜನ್ಮದಲ್ಲಿ ॥
ಅಂದಿನಾ ಆ ನೋಟ ವೈರಿಗಳ ಕಾದಾಟ
ಇಂದಿಗೂ ಕಾಣುತ್ತಿದೆ ಕಣ್ಣ ಎದುರಿನಲ್ಲಿ ॥

○ **ಹೊದ್ದೇಟ ಭವಾನಿಶಂಕರ್**

---

**ಸೂಕ್ತಿ**

ತಿಳುವಳಿಕೆಯಿದ್ದರೆ, ಎಲ್ಲವನ್ನು ರೂಪಿಸಬಹುದು. ಆ ತಿಳುವಳಿಕೆ ಬರಲು ಸದ್ಗುಣ ಅಗತ್ಯ.

-**ಟಾಲ್‌ಸ್ಟಾಯ್**

---

## ಸೊಬಗಿನ ಬೀಡು

ಅಂದದೂರು ಚೆಂದದೂರು
ಆನಂದದ ತವರೂರು
ಒಮ್ಮೆ ನೋಡಿ ನಮ್ಮೂರು
ನೀವೆ ಹೇಳಿ ಯಾವೂರು ಎಂದು
ಇದುವೇ "ಗಾಳಿಬೀಡು" ನಮ್ಮದು
ಎಲ್ಲೆಲ್ಲೂ ಬೆಟ್ಟ ಗುಡ್ಡಗಳ ನೋಟ
ಸುತ್ತಲೂ ಕಾಫಿ, ಟೀ, ಏಲಕ್ಕಿ ತೋಟ
ಸೌಂದರ್ಯ ಸೊಬಗಿನ ಸುಂದರ ಬೀಡು
ಇರುವುದು ಸುತ್ತಲೂ ಹಸಿರು ಕಾಡು
ಎಲ್ಲರೂ ಬನ್ನಿರಿ ಪ್ರಕೃತಿಯನ್ನು ಸವಿಯಿರಿ
ಬಂದು, ಗಾಳಿಬೀಡಿನ ನೆಮ್ಮದಿ ಪಡೆಯಿರಿ
ಇರುವುದಿಲ್ಲ ಅಬ್ಬಿಪಾಲ್ಸ್
ಇದುವೇ ಕೊಡಗಿಗೆ ಫೇಮಸ್ಸ್
ಮುಂದೆ ಆಗುವುದು ಇದರಲ್ಲಿ ವಿದ್ಯುತ್‌ಭಕ್ತಿ
ಇದುವೇ ಗಾಳಿಬೀಡಿನ ಶಕ್ತಿ
ಒಮ್ಮೆ ಗಾಳಿಬೀಡಿನ ಸೌಂದರ್ಯ ನೋಡಿ
ಇಲ್ಲಿಗೆ ಬರುವುದನ್ನು ಮರೆಯಬೇಡಿ

**ಕಡಂಬಳ ಮಾಸ್ಟರ್ ಮೋಹನ್**
ಗಾಳಿಬೀಡು

---

[11ನೇ ಪುಟದಿಂದ]

ಸ್ವಲ್ಪ ಹೊತ್ತು ಬಿಟ್ಟು ಅಲ್ಲಿಗೆ ಬಂದೆ. ಅಲ್ಲಿದ ಹಿರಿಯರೊಬ್ಬರು "ಎಲ್ಲಿಗೇನೊ, ಬೀಡಿ ಎಳಲಿಕ್ಕೆ ಹೋಗಿದ್ದಾ" ಎಂದರು. ಆದರೇ ನಾನಾಗ ಬೀಡಿ ಎಳೆಯಲು ಹೋಗಿರಲಿಲ್ಲ. ಸ್ವಲ್ಪ ಸಿಟ್ಟು ಬಂತು, ಜೇಬಿನಲ್ಲಿದ್ದ ಸಿಗರೇಟ್ ಪ್ಯಾಕ್‌ನಿಂದ ಒಂದು ಸಿಗರೇಟ್ ತೆಗೆದು ಅವರ ಮುಂದೆ ತಗೊಳ್ಳಿ ಎಂದೆ. ಅವರ ಬಾಯಿಂದ ಮಾತೇ ಹೊರಡಲಿಲ್ಲಾ. ಅವರೇನು ತಿಳಿದು ಕೊಂಡರೇನು. ನನಗಂತೂ ಅವರ ಪ್ರಶ್ನೆಗೆ ಉತ್ತರ ಕೊಟ್ಟ ತೃಪ್ತಿ ಇತ್ತು. ಅಯ್ಯೋ ಮನುಷ್ಯನಲ್ಲಿ ಪ್ರಶ್ನಾತ್ಮಕ ದೃಷ್ಟಿಯೇ ಜಾಸ್ತಿ.

**ಕುಂಬಗೌಡನ ಅರವಿಂದ ಮಾಚಯ್ಯ**
ಮಕ್ಕಂದೂರು

## ಉತ್ತನ್ನಾಡಿ – ಜಗನ್ನಾಡಿ ಪುರುಷರು

ಮಲೆನಾಡು ಪ್ರದೇಶದಲ್ಲಿರುವ ಪುರುಷ ದೈವಗಳ ಕತೆಗಿಂತ ಬೇರೆ ಸ್ವರೂಪದ ಕತೆಯು ಕರಾವಳಿ ಪ್ರದೇಶದಲ್ಲಿ ಕಾಣಿಸಿಕೊಂಡಿವೆ. ಉತ್ತನ್ನಾಡಿ–ಜಗನ್ನಾಡಿ ಇಬ್ಬರು ಅಣ್ಣ ತಮ್ಮಂದಿರು. ಇವರು ತಂದೆ ತಾಯಿಯರನ್ನು ಬಾಲ್ಯದಲ್ಲಿಯೇ ಕಳೆದುಕೊಂಡಿರುತ್ತಾರೆ. ತಂದೆಯ ಹೆಸರು ಬೈಲಂಗ ಪುರುಷ–ತಾಯಿ ಬೈಲಂಗಿ ಪುರುಷೆದಿ. ಇವರು ಬೆಳೆದು ದೊಡ್ಡವರಾದಾಗ ತಮ್ಮ ಕುಲವೃತ್ತಿಯಾವುದೆಂದು ತಿಳಿದುಕೊಳ್ಳಲು ಪ್ರಯತ್ನಿಸುತ್ತಾರೆ. ಅವರ ಮನೆಯಲ್ಲಿದ್ದ ಕಲ್ಲು ಕಲೆಂಬಿಯೊಳಗೆ ತಾಮ್ರದ ಪಟ್ಟಿಯೊಂದು ಸಿಗುತ್ತದೆ. ಅದರಲ್ಲಿ ಬರೆದಿರುವ ಪ್ರಕಾರ – ನಾಲ್ಕು ಮನೆ ತಿರುಗಿ ಬೇಡುವುದು ಅವರ ಕುಲವೃತ್ತಿಯೆಂದು ತಿಳಿದು ಬರುತ್ತದೆ. ಜ್ಯೋತಿಕೋಲು ಜಂತಿಜೋಳಿಗೆ ತಯಾರಿಸಿಕೊಂಡು ಬೇಡುತ್ತಾ ಕಾಶಿಗೆ ಪ್ರಯಾಣ ಹೊರಡುತ್ತಾರೆ.

ದಾರಿಯಲ್ಲಿ ಕಲ್ಲೆಂಬಿ ಪರ್ಗಡೆಯ ಮನೆ ಸಿಗುತ್ತದೆ. ಪರ್ಗಡೆಯು ದಂಡಿಗೆ ಹೋಗಿರುವುದಾಗಿ ತಿಳಿದು ಬರುತ್ತದೆ. ರಾತ್ರಿಯಾದ ಕಾರಣ ಉಳಿದುಕೊಳ್ಳಲು ಅವಕಾಶ ಕೇಳುತ್ತಾರೆ. ಪರ್ಗಡೆಯ ಸೊಸೆ ದಾರಮ್ಮ ಮನೆಯ ಹೊರಗಿನ ಸೌದೆ ಕೊಟ್ಟಿಗೆಯಲ್ಲಿ ಉಳಿದುಕೊಳ್ಳಲು ಹೇಳುತ್ತಾಳೆ, ಅನ್ನ ಮಾಡಲು ಮಡ್ಡಿ ಮಡಿಕೆ, [ದನಗಳಿಗೆ ಆಹಾರ ಬೇಯಿಸುವ ಮಡಿಕೆ]ಸಾರು ಮಾಡಲು ಸುಣ್ಣದ ಪಾತ್ರೆ,ಮಲಗಲು ಮೆಣಸಿನ ಚಾಪೆ ಕೊಡುತ್ತಾಳೆ. ಅದೇ ರಾತ್ರಿ ಪೆರ್ಗಡೆ ಯುದ್ಧದಿಂದ ಹಿಂತಿರುಗುತ್ತಾನೆ. ಸೊಸೆಯಿಂದ ಎಲ್ಲಾ ವಿಚಾರ ತಿಳಿದು ಆಕೆ ಮಾಡಿದ್ದು ಸರಿಯಲ್ಲವೆಂದು ಹೇಳುತ್ತಾನೆ. ಸೌದೆ ಕೊಟ್ಟಿಗೆಗೆ ಹೋಗಿ ಅವರನ್ನು ಒಳಗೆ ಬರಲು ಹೇಳುತ್ತಾನೆ. ಇನ್ನೇನು ಬೆಳಗಿನ ಜಾವ ಆಗಿರುವ ಕಾರಣ ಮುಂದೆ ಪ್ರಯಾಣ ಬದ್ಧರಾಗಿದ್ದೇವೆಂದು ಹೇಳಿ ಒಳಗೆ ಬರಲು ನಿರಾಕರಿಸುತ್ತಾರೆ. ಅವರು ಹೊರಡುವ ಮೊದಲು ಸೌದೆ ಕೊಟ್ಟಿಗೆಯಲ್ಲಿ ಎರಡು ವಿಷಜಂತುಗಳನ್ನು ಸೃಷ್ಟಿಸಿರುತ್ತಾರೆ. ಅವರು ಅಂಗಳವನ್ನು ದಾಟುವಷ್ಟರಲ್ಲಿಯೇ ಅವುಗಳು ದಾರಮ್ಮಳಿಗೆ ಕಚ್ಚಿ ಅವಳು ಸಾಯುತ್ತಾಳೆ. ಪರ್ಗಡೆಯು ಅವರಲ್ಲಿ ಕ್ಷಮೆ ಕೇಳಿಕೊಂಡ ಕಾರಣ ಹಿಂತಿರುಗಿ ಬಂದು ಜಂತಿಜೋಳಿಗೆಯಿಂದ ಕಾಶಿಯ ಕಾಲಭೈರವನ ಮದ್ದು ತೆಗೆದು ಆಕೆಗೆ ಲೇಪಿಸುತ್ತಾರೆ. ಆಗ ಆಕೆಗೆ ಜೀವ ಬರುತ್ತದೆ.

ಅಲ್ಲಿಂದ ಮುಂದೆ ಹೋಗುತ್ತಾ ದಾರಿಯಲ್ಲಿ ಮಲಂಜಿರ್ ಬೈದ್ಯ ಮತ್ತು ಬೈದ್ಯೆತಿ ಕಾಣ ಸಿಗುತ್ತಾರೆ. ಅವರನ್ನು ಮನೆಗೆ ಕರೆದು ಉಪಚರಿಸಿ ಕುಡಿಯಲು ಹಾಲು ಕೊಡುತ್ತಾರೆ ಅದನ್ನು ಸ್ವೀಕರಿಸಿ ಬಾಯಾರಿಕೆ ನೀಗಿಸಿಕೊಳ್ಳುತ್ತಾರೆ. ಸಂತಸಗೊಂಡು ಬೈದ್ಯೆತಿಗೆ ಒಂದು ಹಿಡಿ ಅಕ್ಕಿಯನ್ನು ಜಂತಿಜೋಳಿಗೆಯಿಂದ ತೆಗೆದು ಕೊಡುತ್ತಾರೆ.ಮುಂದೆ ಅವರಿಗೆ ಬದುಕು,ಭಾಗ್ಯ ಹೆಚ್ಚುತ್ತದೆ. ಪುತ್ರ ಸಂತಾನವಾಗುತ್ತದೆ. ಆಕೆಯ ಮಗ ಬೆಳೆದು ದೊಡ್ಡವನಾಗುತ್ತಾನೆ. ಅವಸ ಮದುವೆಯ ದಿವಸ ಪುರುಷರು ಕಾಶಿಯಿಂದ ಹಿಂತಿರುಗಿ ಬರುತ್ತಾರೆ. ನೀವು ನನ್ನ ಅಣ್ಣಂದಿರಿಗೆ ಸಮಾನರಾದ ಕಾರಣ ತನ್ನ ಮಗನಿಗೆ ಧಾರೆ ಹೊಯ್ಯಿರೆಂದು ಮಲಂಜಿರಬೈದ್ಯೆತಿ ಕೇಳಿಕೊಳ್ಳುತ್ತಾಳೆ. ಅವರು ಸಂತಸದಿಂದ ಧಾರೆ ಎರೆದು ಹರಸುತ್ತಾರೆ. ಅವರು ಹೊರಡುವ ಸಂದರ್ಭ ಬಂದಾಗ "ಇನ್ನು ನಿಮ್ಮನ್ನು ಯಾವಾಗ ಕಾಣುವುದು" ಎನ್ನುತ್ತಾ ಬೈದ್ಯೆದಿ ದುಃಖಿಸುತ್ತಾಳೆ ಅಕೆಯನ್ನು ಸಂತೈಸಿ ಕಾಶಿಯ ದೇವರನ್ನು ಕೊಟ್ಟು ಅರಾಧಿಸುವುದಕ್ಕೆ ಹೇಳುತ್ತಾರೆ. ಮುಂದೆ ಆಕೆಯ ಸ್ಥಾನಮಾನ ಹೆಚ್ಚುತ್ತದೆ. ಕರಾವಳಿ ಪ್ರದೇಶದಲ್ಲಿ ನಾಥಪಂಥ ಪ್ರಚಲಿತವಾಗಿದ್ದು ಭೂತರಾಧನೆಯ ಸ್ವರೂಪ ತಾಳಿದ್ದು ಕಂಡುಬರುತ್ತದೆ.

ಆಧಾರ : ಸಿರಿ- [ಅಮೃತ ಸೋಮೇಶ್ವರರ ಅಭಿನಂದನಾ ಗ್ರಂಥ] 1995

○ ಎಸ್. ಎಸ್. ದೇವಿಪ್ರಸಾದ್

## ಸುಭಾಷಿತ ರತ್ನಮಂಜರಿ

ಪ್ರಪಂಚವೊಂದು ಸುಂದರ ರಂಗಭೂಮಿ
ಒಬ್ಬನದು ವೈದ್ಯನ ಪಾತ್ರ, ಒಬ್ಬನದು ರೋಗಿಯ ಪಾತ್ರ
ಕೆಲವರದು ಮಂತ್ರಿಗಳ ಪಾತ್ರ, ಹಲವರದು ಪ್ರಜೆಗಳ ಪಾತ್ರ
ಸೂತ್ರಧಾರನು ಕಣ್ಣಿಗೆ ಕಾಣಿಸನು ಆದರೂ ಸಹ ನಾಟಕ ನಡದೇ
ನಡೆಯುತ್ತದೆ.

ಧನವಿದ್ದಾಗ ದಾನಮಾಡಲಿಲ್ಲ, ಬಲವಿದ್ದಾಗ ಬಿದ್ದವನ ಎತ್ತಲಿಲ್ಲ
ಅಧಿಕಾರವಿದ್ದಾಗ ಉಪಕಾರ ಮಾಡಲಿಲ್ಲ, ಯೌವನವಿದ್ದಾಗ
ಸೇವೆಗೈಯಲಿಲ್ಲ
ಮುಪ್ಪಡರಿದ ಮೇಲೆ ಪಾಪದ ಭೀತಿ, ಇದು ಮಾನವರ ರೀತಿ
ಪುಣ್ಯ ಮಾಡಲೆಂದು ಹೊತ್ತು ಕಾಯುವುದೇ, ಕ್ಷಣ ಬಿಡದೆ
ಸೆಳೆಯುವುದು ಮೃತ್ಯುಕೂಪಕೆ

ಸ್ವಾರ್ಥಕ್ಕಾಗಿ ಕೆಲವರು ಕಟ್ಟಲೆಗಳು ನಿರ್ಮಿಸಿಕೊಂಡು ಬೀಗಿದರು
ಅವರ ಸ್ವಾರ್ಥ ಹೆಮ್ಮರವಾಗಿ ಬೆಳೆದು ದೇಶವನ್ನೇ ನುಂಗಿತು
ಯಾರೋ ಒಬ್ಬರು ಒಬ್ಬರನ್ನು ನುಂಗಿದರೆ ಹೇಗೊ ಸೈರಿಸಬಹುದು
ಒಬ್ಬೊಬ್ಬರು ಒಬ್ಬೊಬ್ಬರನ್ನು ನುಂಗಿದರೆ ಉಳಿದೀತೆ
ಈ ದೇಶ ?

ಸಂಗ್ರಹ : ಉರುಂಡೆ ಆರ್. ರುಕ್ಮಿಣಿ, ಅಮ್ಮಂದೂರು.

# "ಕಣ್ಣೀರ ಹೊನಲಲ್ಲಿ ತೇಲುತ್ತಿರುವ ಹೆಣ್ಣು"

ಇಡೀ ವಿಶ್ವದಲ್ಲಿ ಮಾನವ ಅತ್ಯಂತ ಬುದ್ಧಿವಂತ ಜೀವಿ. ಈ ಮನುಷ್ಯನಲ್ಲಿ ಕೇವಲ ಎರಡೇಎರಡು ಜಾತಿ. 1] ಗಂಡು, 2]ಹೆಣ್ಣು. ಆದಿಕಾಲದಲ್ಲಿ ಹೆಣ್ಣು ದೇವರಿಗೆ ಸಮಾನಳಾಗಿದ್ದಳು. 'ಆಕೆ ಗೃಹಿಣಿ ಗೃಹ ಮುಚ್ಛತೆ' ಎಂಬಂತೆ ಅಡುಗೆ ಮನೆಯ ನಾಲ್ಕು ಗೋಡೆಗಳ ಮಧ್ಯೆಯಲ್ಲಿದ್ದರೂ ಪರಮಪೂಜ್ಯಳಾಗಿದ್ದಳು.

ಆದಿಕಾಲದಲ್ಲಿ ಯಾವ ಹೆಣ್ಣು ಪರಮ ಪೂಜ್ಯಳಾಗಿದ್ದಳೋ ಅಂತಹ ಹೆಣ್ಣು ಇಂದಿನ ಸಮಾಜದಲ್ಲಿ ತಲೆ ಎತ್ತಿ ನಡೆಯಲಾರದೇ ಕಣ್ಣೀರ ಹೊನಲಲ್ಲಿ ತೇಲುತ್ತಿರುವಳು. ಒಂದು ಹೆಣ್ಣು ಒಂದು ಮಗುವಿಗೆ ಜನ್ಮ ನೀಡಿದಳೆಂದಾಗ ಜನರು ಮೊದಲು ಕೇಳುವುದು ಎಂಥ ಮಗು ಎಂದು ? ಹೆಣ್ಣು ಎಂದಾಗ ಹೆಣ್ಣಾ....??? ಎಂದು ವ್ಯಂಗ್ಯವಾಗಿ ಕೇಳುತ್ತಾರೆ. ಆದರೆ ಗಂಡು ಮಗುವಾದರೆ ಓಹೋ ಗಂಡು ಮಗುವಾCongradulation ಎಂದು ಮಗುವಿನ ತಂದೆ-ತಾಯಿಯರನ್ನು ತುಂಬು ಹೃದಯದಿಂದ ಅಭಿನಂದಿಸುತ್ತಾರೆ. ಹುಟ್ಟಿದ ಆ ಕ್ಷಣದಿಂದಲೇ ಹೆಣ್ಣುಮಗು ಆ ಮನೆಗೆ ಹುಣ್ಣಾಗಿ ಕಾಣಿಸಿಕೊಳ್ಳುತ್ತಾಳೆ.ಹಾಗೆಯೇ ಮಗು ಬೆಳೆಯುತ್ತಾ ಬಂದು ಹದಿನಾಲ್ಕು-ಹದಿನಾರು ವರ್ಷಗಳು ತುಂಬಿದಾಗ ಸಮಾಜ ಆಕೆಯ ಮೇಲೆ ವಕ್ರದೃಷ್ಟಿಯನ್ನು ಬೀರುತ್ತದೆ. ಆಕೆ ಯಾರೊಂದಿಗೂ ಮಾತನಾಡುವಂತಿಲ್ಲ, ನಗುವಂತಿಲ್ಲ, ಓಡಾಡುವಂತಿಲ್ಲ, ಒಂದು ವೇಳೆ ಹಾಗೇನಾದರೂ ನಡೆದುಕೊಂಡಿದ್ದೇ ಆದರೆ ಆಕೆಯನ್ನು ನಾಲ್ಕಾರು ಜನ ಇರಲಿ, ಇಡೀ ಸಮಾಜವೇ ವೇಶ್ಯೆಯೆಂದು ಕರೆಯುತ್ತದೆ. ಹಾಗಾದರೆ ಇಂದಿನ ಸಮಾಜದಲ್ಲಿ ಪ್ರತಿಯೊಬ್ಬ ಹೆಣ್ಣು ವೇಶ್ಯೆಯಾದರೆ ಒಳ್ಳೆಯವರಾರು ?

ಒಂದು ಹೆಣ್ಣು ಒಬ್ಬ ಪುರುಷನೊಂದಿಗೆ ಮಾತನಾಡಿದ ಮಾತ್ರಕ್ಕೆ ಆಕೆ ವೇಶ್ಯೆಯೇ? Cream Powder ಹಚ್ಚಿ ಮುಖಕ್ಕೆ ಅಲಂಕಾರ ಮಾಡಿಕೊಂಡ ಮಾತ್ರಕ್ಕೆ ಆಕೆ ವೇಶ್ಯೆಯೇ ? ಕಾಲೇಜು ವಿದ್ಯಾಭ್ಯಾಸ ಮಾಡಿದ ಮಾತ್ರಕ್ಕೆ ಆಕೆ ವೇಶ್ಯೆಯೇ ? ದಿನಂಪ್ರತಿ ಬಸ್-ಕಾರು-ಜೀಪುಗಳಲ್ಲಿ ತಿರುಗಾಡಿದ ಮಾತ್ರಕ್ಕೆ ಆಕೆ ವೇಶ್ಯೆಯೇ, ಒಬ್ಬಳೇ ರಸ್ತೆಯಲ್ಲಿ ನಡೆದಾಡಿದ ಮಾತ್ರಕ್ಕೆ ಆಕೆ ವೇಶ್ಯೆಯೇ!?

ಈ ಮೇಲಿನ ಎಲ್ಲ ರೀತಿಗಳಲ್ಲೂ ಹೆಣ್ಣನ್ನು ಸಮಾಜ ಕೆಟ್ಟ ದೃಷ್ಟಿಯಿಂದ ಬೆರಳು ಮಾಡಿ ತೋರಿಸುತ್ತಿದೆ.

ಮಾತು-ನಗೆ-ನೋಟ-ಇವು ಮಾನವನ ಸಹಜ ಲಕ್ಷಣಗಳು, ಸೃಷ್ಟಿಕರ್ತನಾದ ಭಗವಂತ ಕೊಟ್ಟಂಥ ವರ. ಇದನ್ನು ಉಪಯೋಗಿಸಿಕೊಳ್ಳಲು ಮಾನವ ಜನ್ಮವೇ ಹೊರತು ಮತ್ತಾವುದೂ ಅಲ್ಲ.

ಅಲಂಕಾರ-ಪ್ರತಿಯೊಬ್ಬರೂ ಅಲಂಕಾರ ಮಾಡಿಕೊಳ್ಳುವುದು ಸಹಜ. ಗಂಡು ಅಲಂಕಾರ ಮಾಡಿಕೊಳ್ಳುವುದಿಲ್ಲವೇ ? ಹಾಗಾದರೆ ಹೆಣ್ಣಿಗೇಕೆ ಈ ಶೋಷಣೆ ?

ವಿದ್ಯಾಭ್ಯಾಸ-ಹೆಣ್ಣಾದ ಮಾತ್ರಕ್ಕೆ ಕಾಲೇಜಿಗೆ ಹೋಗಬಾರದೆ? ಆಕೆಗೆ ವಿದ್ಯಾಭ್ಯಾಸ ಮಾಡುವಷ್ಟು ಸ್ವತಂತ್ರತೆ ಇಲ್ಲವೇ? ಮತ್ತೇಕೆ ಕಾಲೇಜು ಹುಡುಗಿಯರು ವೇಶ್ಯೆಯೆಂಬ ಭಾವನೆ ?

ಇಂಥ ಭಾವನೆಗಳು ಗ್ರಾಮಾಂತರ ಪ್ರದೇಶಗಳಲ್ಲಿನ ಜನರಲ್ಲಿ ಮೂಡಿ ಹೆಣ್ಣನ್ನು ನರಕದ ಕೂಪಕ್ಕೆ ತಳ್ಳುತ್ತಿದ್ದಾರೆ. ದೇಶದ ಮೂಲೆಮೂಲೆಗಳಿಂದ ಸ್ತ್ರೀ ಶೋಷಣೆ ನಿಲ್ಲಬೇಕೆಂಬ ಆರ್ಭಟ ಕೇಳಿ ಬರುತ್ತಿದ್ದರೂ ಶೋಷಣೆ ನಡೆದೇ ನಡೆಯುತ್ತಿದೆ. ಬಹುಶಃ ಸ್ತ್ರೀ ಶೋಷಣೆ ನಿಲ್ಲಬೇಕೆಂಬ ಕೂಗು ಸ್ತ್ರೀಯನ್ನು ಶೋಷಣೆಗೆ ಒಳಪಡಿಸಿ ಎಂದು ಕೇಳುತ್ತಿರಬಹುದಲ್ಲವೇ ?

ಹಳ್ಳಿಗಳಲ್ಲಿ ಹೆಣ್ಣಿಗೆ ಎಳ್ಳಷ್ಟು ಸ್ವತಂತ್ರತೆ ಸಿಕ್ಕಿಲ್ಲ. ಮರ್ಯಾದೆಯಾಗಿ ಮುನ್ನಡೆಯ ಬಯಸುವ ಹೆಣ್ಣನ್ನು ಬೇಕೆಂದೇ ಕೆಡಿಸಲು ಪ್ರಯತ್ನ ಪಡುವವರು ಹತ್ತು ಹಲವಾರು ಜನ. ಮರ್ಯಾದೆಯ ಸರಹದ್ದಿನೊಳಗಿದ್ದುಕೊಂಡೇ ವೇಶ್ಯೆಯೆಂದು ಕರೆಸಿಕೊಂಡು ಆ ಹೆಣ್ಣು ಪ್ರತಿ ಕ್ಷಣ-ಕ್ಷಣಕ್ಕೂ ಕಣ್ಣೀರಿಡುವ ಪರಿಸ್ಥಿತಿ ದಿನಂಪ್ರತಿ ಕಂಡು ಬರುತ್ತದೆ. ಪ್ರತಿಯೊಬ್ಬ ಹೆಣ್ಣು ಕೆಟ್ಟವಳಾದರೆ ಒಳ್ಳೆಯವರನ್ನು ಹುಡುಕುವುದು ಅನಿವಾರ್ಯವಲ್ಲ ತಾನೇ ?

ಒಂದು ಕಡೆಯಿಂದ ವೇಶ್ಯೆಯರೆಂದು ಕರೆಸಿಕೊಂಡು ಚಡಪಡಿಸುವುದರೊಂದಿಗೆ 'ವರದಕ್ಷಿಣೆ' ಎಂಬ ಪೆಡಂಭೂತದ ಕೈಗೆ ಸಿಕ್ಕಿ ಬಲಿಯಾಗುತ್ತಿದ್ದಾಳೆ ಈ ಹೆಣ್ಣು.

ಇದರಿಂದ ಸ್ತ್ರೀ ತಂದೆ ತಾಯಿಯರಿಗೆ ಒಡೆದು ಸೋರುತ್ತಿರುವ ಹುಣ್ಣಾಗಿದ್ದಾಳೆ.

ಹಾಗಾದರೆ ಹೆಣ್ಣಿನ ಕಣ್ಣೀರು ಇಂಗುವುದು ಯಾವಾಗ ?

1. ಇಡೀ ಸ್ತ್ರೀ ಸಮಾಜವೇ ರೊಚ್ಚಿಗೆದ್ದು ಹೋರಾಡಿದಾಗಲೋ ?

2. ಸ್ತ್ರೀ-ಪುರುಷರೊಡಗೂಡಿ ಶ್ರಮಿಸಿದಾಗಲೋ ?

3. ಸ್ತ್ರೀ ವೇಶ್ಯೆ-ವರದಕ್ಷಿಣೆ ಎಂಬ ಮಾರಕ ರೋಗಗಳಿಂದ ಸಾವನ್ನಪ್ಪಿದಾಗಲೋ ?

ಈ ಮೇಲಿನ ಮೂರು ಪ್ರಶ್ನೆಗಳಿಂದಲೂ ಹೆಣ್ಣಿನ ಕಣ್ಣೀರು ಬತ್ತಲಾರದು. ಹಾಗಾದರೆ ಆ ಕಣ್ಣೀರು ಬತ್ತುವುದು ಯಾವಾಗ ಗೊತ್ತೇ ?

ಇಡೀ ಮನುಕುಲದ ನಾಶ [ಅಂತ್ಯ]ವಾದಾಗ ಎಂದು ಮೇಲಿನ ಪ್ರಶ್ನೆಗೆ ಉತ್ತರಿಸುವುದರಲ್ಲಿ ಸಂಶಯವೇ ಇಲ್ಲ.

○ ಉರುಂಡೆ ಆರ್. ರುಕ್ಮಿಣಿ
ಅಮಂದೂರು

## ಟೀಕೆ - ಟಿಪ್ಪಣಿ

ದಿನಾಂಕ 4-1-98ರಲ್ಲಿ ನಡೆದ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಸಮ್ಮೇಳನದಲ್ಲಿ ಜರುಗಿದ ಕಾರ್ಯಕ್ರಮ ಗಳು ಬಹಳ ವಿಶೇಷವಾಗಿತ್ತು. ಅದರಲ್ಲಿ ನಮ್ಮ ಮಾತೃಭಾಷೆಯಾದ ಅರೆಭಾಷೆಗೆ ಬಹಳ ಮಹತ್ವ ಕೊಟ್ಟದು ಇನ್ನೂ ವಿಶೇಷವಾಗಿತ್ತು. ಅದನ್ನು ನೋಡಿ ತುಂಬಾ ಸಂತೋಷವಾಯಿತು. ಇನ್ನು ಮುಂದೆಯೂ ಹೀಗೆ ನಡೆಯಲಿ ಎಂದು ಆಶಿಸುತ್ತೇನೆ.

ಆದರೆ ಇತ್ತೀಚೆಗೆ ಕುಶಾಲನಗರದಲ್ಲಿ ಸಂತೋಷ ಕೂಟ ನಡೆಯಿತು. ಅಲ್ಲಿ ಅರೆ ಭಾಷೆಗೆ ಹೆಚ್ಚು ಒಲವು ಕೊಟ್ಟಂತೆ ಕಂಡು ಬರಲಿಲ್ಲ. ಕೆಲವರಿಗೆ ಕಾರಣಾಂತರಗಳಿಂದ ಭಾಷೆ ಗೊತ್ತಿಲ್ಲವೊ ಏನೋ ಆದರೆ ಇನ್ನು ಕೆಲವರಿಗೆ ಗೊತ್ತಿದ್ದರೂ ಮಾತಾನಾಡಲು ಜಂಭವೊ ಅಥವಾ ಅವರ ಪ್ರತಿಷ್ಠೆಗೆ ಧಕ್ಕೆಯೂ ತಿಳಿಯದು ಹೀಗೆ ಸಾಗಿದರೆ ಕಾಲ ಕ್ರಮೇಣ ನಮ್ಮ ಭಾಷೆ ಮೂಲೆ ಗುಂಪಾಗು ವುದರಲ್ಲಿ ಸಂಶಯವಿಲ್ಲ. ಅದು ಹಾಗಾಗುವ ಮೊದಲೇ ಎಚ್ಚೆತ್ತು ಕೊಳ್ಳಬೇಕು ತಂದೆ ತಾಯಂದಿರು ತಮ್ಮ ಮಕ್ಕಳನ್ನು ಹೇಗೆ ಪ್ರೀತಿಯಿಂದ ಬೆಳೆಸುತ್ತಾರೋ ಆದೇ ರೀತಿ ಯಲ್ಲಿ ನಮ್ಮ ಮಾತೃಭಾಷೆಯನ್ನು ಪ್ರೀತಿಸಿ ಬೆಳೆಸಬೇಕು. ಒಂದು ಅಕ್ಕಿ ಹಾಗೂ ಒಂದು ಮೆಣಸಿನ ಕಾಯಿಂದ ಹೇಗೆ ಅನ್ನ ಸಾರು ಆಗುವುದಿಲ್ಲವೊ ಅದೇ ರೀತಿಯಲ್ಲಿ ನಮ್ಮ ಭಾಷೆಯೂ ಕೂಡ ಆದ್ದ ರಿಂದ ನಮ್ಮ ಜನಾಂಗದ ಬಂಧು ಬಾಂಧ ವರೆಲ್ಲರೂ ಸೇರಿ ಸಹಕರಿಸಿದರೆ ನಮ್ಮ ಮಾತೃ ಭಾಷೆ ಬೆಳೆಯಲು ಸಾಧ್ಯ.

ಇಲ್ಲದಿದ್ದರೆ ಸಂಘ, ಸಂಸ್ಥೆ, ಸಮ್ಮೇಳನ, ಸಂತೋಷ ಕೂಟ ಇವುಗಳಿಗೆ ಅರ್ಥವೇನು? ಬೆಲೆಯೇನು ?

● **ಅಯ್ಯಂಡ್ರ ಪುಷ್ಪಯಾದವ**
ಕುಶಾಲನಗರ

## ಭಾಗಮಂಡಲದಲ್ಲಿ ಮಹಿಳಾ ಒಕ್ಕೂಟದ ವಿಶೇಷ ಸಮಾರಂಭ

ಕೊಡಗು ಗೌಡ ಮಹಿಳಾ ಒಕ್ಕೂಟದ ಪರವಾಗಿ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಭಾಗಮಂಡಲ ಸಮಿತಿಯು ದಿನಾಂಕ 25-1-98 ಭಾನುವಾರದಂದು ವಿಶೇಷ ಸಭೆ ಯೊಂದನ್ನು ಕರೆದಿತ್ತು.

ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಹೊಸೂರು ಡಿ. ಜೋಯಪ್ಪನವರು ಮಾತನಾಡುತ್ತಾ,"ನಮ್ಮ ಹಿರಿಯರು ಗೌಡ ಜನಾಂಗದ ಏಳಿಗೆಗಾಗಿ ತುಂಬಾ ಶ್ರಮಪಟ್ಟಿದ್ದಾರೆ. ಈಗ ಅವರ ಸ್ಮರಣೆ ಅಗತ್ಯ" ಎಂದು ಹೇಳಿದರು. ಹಾಗೆ ಮುಂದುವರೆದ ಜೋಯಪ್ಪನವರು ದಿ॥ ಗುಡ್ಡೆಮನೆ ಅಪ್ಪಯ್ಯಗೌಡರಾದಿಯಾಗಿ ನಮ್ಮ ಜನಾಂಗದ ಸ್ವಾತಂತ್ರ್ಯ ಹೋರಾಟಗಾರನ್ನು ನೆನಪು ಮಾಡುತ್ತಾ ಬಡವರ, ಮಕ್ಕಳ, ಹಾಗೂ ಸಾಮಾಜಿಕವಾಗಿ ಹಿಂದುಳಿದವರ ಏಳಿಗೆಗಾಗಿ ಗೌಡಸಮಾಜ ಶ್ರಮಿಸಬೇಕು ಎಂದು ಕರೆ ನೀಡಿದರು.

ಸಭೆಯಲ್ಲಿ ಅಥಿತಿಯಾಗಿ ಭಾಗವಹಿಸಿದ್ದ ಕೊಡಗು ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷೆ ಶ್ರೀಮತಿ ಚೀಯಂಡಿ ರಾಧ ಯಾದವ್‌ರವರು ಮಾತನಾಡಿ ಮಹಿಳಾ ಒಕ್ಕೂಟದ ಧ್ಯೇಯ ಉದ್ದೇಶಗಳನ್ನು ತಿಳಿಸಿದರು. ಮಹಿಳಾ ಒಕ್ಕೂಟದ ಪದಾಧಿಕಾರಿ ಗಳಾದ ಶ್ರೀಮತಿ ಸೂದನ್ ಕಮಲರಾಘವಯ್ಯ ಮಾತನಾ ಡುತ್ತಾ ನಮ್ಮ ಸಮಾಜದ ಒಳಗಿನ ವರದಕ್ಷಿಣೆ ಪಿಡುಗಿನ ಬಗ್ಗೆ ಮದುವೆಯ ಆಡಂಬರದ ಬಗ್ಗೆ ಹೇಳುತ್ತಾ, ವರದಕ್ಷಿಣೆ ಇಲ್ಲದೇ ಸರಳವಾಗಿ ಮದುವೆಗಳು ನಡೆಯುವಂತಾಗಬೇಕು, ವಧುವಿನ ಕಡೆಯವರ ಮೇಲೆ ಹೆಚ್ಚು ಒತ್ತಡವನ್ನು ಹೇರಬಾರದು ಎಂದು ಹೇಳಿದರು.

ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಉಪಾಧ್ಯಕ್ಷೆ ರಾದ ಗುಡ್ಡೇರ ರಮೇಶ್, ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷ ಕುಯ್ಯಮುಡಿ ಪೂರ್ಣಯ್ಯ, ಭಾಗಮಂಡಲ ಗೌಡ ಸಮಾಜದ ಅಧ್ಯಕ್ಷರಾದ ಕುದುಪಜೆ ಭೈರಪ್ಪ, ನಿವೃತ್ತ ಅಧ್ಯಾ ಪಕ ಸುಳ್ಯಕೋಡಿ ನಂಜಪ್ಪ, ಬೇಕಲ್ ಡಾ॥ ಸೋಮನಾಥ ವಕೀಲರಾದ ಪೊನ್ನೇಟಿ ಪೊನ್ನಪ್ಪ ಇವರುಗಳು ಅಥಿತಿಗಳಾಗಿ ಬಾಗವಹಿಸಿ ಮಾತನಾಡಿದರು.

ನಿಡ್ಯಮಲೆ ವಾಣಿಯವರ ಪ್ರಾರ್ಥನೆಯೊಂದಿಗೆ ಆರಂಭ ವಾದ ಕಾರ್ಯಕ್ರಮವನ್ನು ಮೊಟ್ಟನ ಅಮುಲು ದೇವಯ್ಯ ನವರು ಸ್ವಾಗತಿಸಿ, ಕುದುಕುಳಿ ಭರತ್‌ನವರು ವಂದಿಸಿದರು. ಸೂರ್ತಲೆ ಜಯಂತ್‌ಕುಮಾರ್ ಕಾರ್ಯಕ್ರಮ ನಿರೂಪಣೆ ಮಾಡಿದರು. ನಂತರ ಒಂದು ಗಂಟೆಯ ಕಾಲ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು.

ಜನಾಂಗದ ಧಾನಿಗಳ ಸಹಾಯದಿಂದ ಬೆಳಗಿನ ಕಾಫಿ-ತಿಂಡಿ ಮತ್ತು ಮಧ್ಯಾಹ್ನದ ಊಟದ ವ್ಯವಸ್ಥೆ ಮಾಡಲಾಗಿತ್ತು. ಹೆಚ್ಚಿನ ಮಹಿಳೆಯರು ಗೇಂಟೆ ಕಟ್ಟಿ ಸೀರೆ ಉಟ್ಟಿದ್ದದ್ದು ಕೂಡ ಅಂದಿನ ವಿಶೇಷವಾಗಿತ್ತು.

○ **ಪೊನ್ನೇಟಿ ಬಿ.ಸುನಿಲ್**, ಭಾಗಮಂಡಲ

# ನಿಮ್ಮ ಪತ್ರಗಳು

## ಗೌಡ ಮಹಾಜನರಲ್ಲಿ ವಿನಂತಿ

ಮಾನ್ಯರೆ,

ಕೊಡಗಿನ ಗೌಡರ ಆಚಾರ-ವಿಚಾರ ಸಮಾಜದ ಆಗು ಹೋಗುಗಳನ್ನು ಜನರಿಗೆ ತಿಳಿಸಲು ಹಾಗೂ ತಿಳಿಯಲು ಮತ್ತು ಸಮಾಜದ ಜನರ ಒಗ್ಗಟ್ಟನ್ನು ಸಾಧಿಸಲು ಒಂದು ಪತ್ರಿಕೆ ಆವಶ್ಯಕವೆನ್ನುವುದನ್ನು "ಕೊಡಗು ಸಂಗಾತಿ" ಪತ್ರಿಕೆ ಈಗ ಹತ್ತು ತಿಂಗಳಿಂದ ಪ್ರಕಟಗೊಂಡದ್ದರಿಂದ ನಮಗೆಲ್ಲರಿಗೂ ಮನವರಿಕೆಯಾಗಿದೆ. ಪ್ರತಿಯೊಂದು ಸಂಚಿಕೆಯಲ್ಲೂ ಓದುಗರು ಮೆಚ್ಚಿಗೆ ವ್ಯಕ್ತಪಡಿಸುತ್ತಾ ಇದ್ದಾರೆ. ಪತ್ರಿಕೆ ಹೊರಬಂದ ನಂತರ ಗೌಡರಲ್ಲಿ ಹಲವಾರು ಚಟುವಟಿಕೆಗಳು ಪ್ರಾರಂಭವಾಗಿರುವುದನ್ನು ನಾವು ಕಾಣುತ್ತಿದ್ದೇವೆ.

ಪತ್ರಿಕಾ ರಂಗವಾಗಲೀ ಸಾಹಿತ್ಯ ರಂಗವಾಗಲೀ ಹಣತರುವ ಉದ್ಯಮವಲ್ಲ, ಇದನ್ನು ನಡೆಸಿಕೊಂಡು ಬರುವುದು ತುಂಬಾ ಕಷ್ಟ ತರದ ವೃತ್ತಿ. ಇದು ಜನರು ಹೇಳುವಷ್ಟು ಸುಲಭವೂ ಅಲ್ಲ.

"ಕೊಡಗು ಸಂಗಾತಿ"ಯ ಗೌರವ ಸಂಪಾದಕರಾದ ಶ್ರೀ ಪಟ್ಟಡ ಪ್ರಭಾಕರರವರು ಈ ವಿಷಯವನ್ನು ನನ್ನೊಡನೆ ಎರಡು ಮೂರು ಸಲ ಚರ್ಚಿಸಿ ಅವರ ಕಷ್ಟವನ್ನು ವಿವರಿಸಿ ಹೇಳಿಕೊಂಡರು.

ಈ ರೀತಿಯಾಗದೆ ಈ ಪತ್ರಿಕೆಯನ್ನು ನಮ್ಮ ಸಮಾಜದವರು, ಎಲ್ಲರೂ ಸೇರಿ ಶ್ರೀ ಪ್ರಭಾಕರ್‌ರವರ ಕಷ್ಟನ್ನು ನಿವಾರಿಸಿ ಈ ಪತ್ರಿಕೆ ಇನ್ನು ಮುಂದಕ್ಕೂ ಪ್ರಕಟಗೊಳ್ಳುವುದಕ್ಕೆ ಒಂದು ದಾರಿಯನ್ನು ಕಂಡುಹಿಡಿಯಬೇಕು. ಈ ರೀತಿ ಮಾಡದೆ ಪತ್ರಿಕೆ ನಿಂತು ಹೋದರೆ ಇಡೀ ಜನಾಂಗಕ್ಕೆ ಭರಿಸಲಾರದಷ್ಟು ನಷ್ಟವಾಗುತ್ತದೆ. ಇದಕ್ಕೊಂದು ಪರಿಹಾರ ಕಾಣಲೇ ಬೇಕು.

ಪತ್ರಿಕೆ ಒಂದು ಸಲ ನಿಂತು ಹೋದರೆ ನಂತರ ಅದನ್ನು ಪುನಃ ಪ್ರಾರಂಭ ಮಾಡಲು ಯಾರಿಗೂ ಧೈರ್ಯ ಬರುವುದಿಲ್ಲ. ಹಾಗಾಗಬಾರದೆಂದು ನನ್ನ ಅಭಿಲಾಷೆ. ಆದ್ದರಿಂದ ಈ ಪತ್ರಿಕೆಯನ್ನು ಮಡಿಕೇರಿಯ ಗೌಡ ಸಮಾಜವಾಗಲೀ ಅಥವಾ ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿಯಾಗಲೀ ಪತ್ರಿಕೆಯ ವಿತರಣೆಯ ಹಾಗೂ ಹಣ ವಸೂಲು ಮಾಡುವ ಕಾರ್ಯವನ್ನು ಮಾಡುವುದಾದರೆ ಮಾತ್ರ ಈ ಪತ್ರಿಕೆಯು ಮುಂದುವರಿಯಬಹುದೆಂದು ನನ್ನ ಅನಿಸಿಕೆ.

ನಾವು ಬೆಂಗಳೂರಿನಲ್ಲಿ ಕುಳಿತು ಪತ್ರ ಬರೆದರೆ ಈ ಕಷ್ಟ ಪರಿಹಾರವಾಗದು. ಕೊಡಗಿನಲ್ಲಿ ಇರುವ ಸಂಘ ಸಂಸ್ಥೆಗಳು ಈ ವಿಷಯದಲ್ಲಿ ಸಭೆ ಸೇರಿ ಶ್ರೀ ಪ್ರಭಾಕರ್‌ರವರೊಡನೆ ಸಮಾಲೋಚಿಸಿ ಒಂದು ನಿರ್ಧಾರಕ್ಕೆ ಬರುವುದು ಲೇಸೆಂದು ನನ್ನ ಅಭಿಪ್ರಾಯ.

**ಪೂಜಾರಿ ಪೊಣ್ಣಪ್ಪ, ವಕೀಲರು, ಬೆಂಗಳೂರು**

## ನಿಮ್ಮ ಪತ್ರಿಕೆಯೇ ಕಾರಣ

ಮಾನ್ಯರೆ,

ನಿಮ್ಮ ಪಾಕ್ಷಿಕ ಪತ್ರಿಕೆ ನಿದ್ರೆಯಲ್ಲಿದ್ದ ಗೌಡರನ್ನು ಈಗ ಎಚ್ಚರಿಸಿದೆ. ಆದರೆ ನಮ್ಮ ಭಾಗಮಂಡಲ ನಾಡು ಇನ್ನು ಅರೆ ನಿದ್ರೆಯಲ್ಲಿಯೇ ಇದೇ. ಈಗೀಗ ಕೊಡಗಿನಲ್ಲಿ ಮೂಡಿ ಬಂದಿರುವ ಮಹಿಳಾ ಸಮಾಜಗಳು, ಗೌಡ ಸಾಂಸ್ಕೃತಿಕ ಉತ್ಸವ, ಮಡಿಕೇರಿಯ ಹುತ್ತರಿಹಬ್ಬ ಆಚರಣೆ ಮುಂತಾದವುಕ್ಕೆ ನಿಮ್ಮ ಪತ್ರಿಕೆಯೇ ಕಾರಣವೆಂದರೆ ಅತಿಶಯೋಕ್ತಿಯಾಗಲಾರದು. K.R.M.M. ಚಟುವಟಿಕೆ ನಮ್ಮವರಲ್ಲಿಯ ಜ್ಞಾನವನ್ನು ಹೆಚ್ಚಿಸಿದೆ.

**ನಂಗಾರು ಎಂ. ಅಪ್ಪಾಜಿ, ಬೆಂಗಳೂರು**

## ಸೊಗಸಾಗಿ ಮೂಡಿ ಬರುತ್ತಿದೆ

ಮಾನ್ಯರೆ,

"ಕೊಡಗು ಸಂಗಾತಿ" ಪತ್ರಿಕೆ ವೈವಿಧ್ಯ ಅಂಕಣಗಳೊಂದಿಗೆ ಸೊಗಸಾಗಿ ಮೂಡಿ ಬರುತ್ತಿರುವುದು ತುಂಬಾ ಸಂತೋಷದಾಯಕ. ಗೌಡ ಜನಾಂಗದ ಜನರಲ್ಲಿ ಜಾಗೃತಿ ಮೂಡಿಸುವ ಮಹತ್ಕಾರ್ಯವನ್ನು ತಮ್ಮ ಪತ್ರಿಕೆಯ ಮೂಲಕ ಮಾಡುತ್ತಿರುವುದು ಪ್ರಶಂಸನಿಯ. ಮನೆ ಮಂದಿಯೆಲ್ಲಾ ಒಂದೆಡೆ ಸೇರಿ ಓದಬಹುದಾದ ಸಂಗ್ರಹಯೋಗ್ಯ ಪತ್ರಿಕೆ – "ಕೊಡಗು ಸಂಗಾತಿ".

ಗೌಡ ಜನಾಂಗದ ಉದಯೋನ್ಮುಖ ಲೇಖಕರಿಗೆ ಹೆಚ್ಚೆಚ್ಚು ಅವಕಾಶ ಮಾಡಿಕೊಟ್ಟು ಪತ್ರಿಕೆ ನಿರಂತರ, ಸರ್ವಾಂಗ ಸುಂದರವಾಗಿ ಮುಂದೆಯೂ ಮೂಡಿ ಬರಲಿ ಎಂದು ಹಾರೈಸುತ್ತೇನೆ.

ತಮ್ಮ ಪತ್ರಿಕಾ ಬಳಗಕ್ಕೆ ಹಾರ್ದಿಕ ಶುಭಾಶಯಗಳು

**ಪ್ರೊ॥ ಕೆ. ಜಿ. ಹೊನ್ನಮ್ಮ, ಸುಳ್ಯ ದ. ಕ.**

## ಅಭಿವೃದ್ಧಿಗೆ ದಾರಿದೀಪವಾಗಲಿ

ಮಾನ್ಯರೆ,

ಇದೀಗ ತಾನೇ ಮೂಡಿ ಬರುತ್ತಿರುವ "ಕೊಡಗು ಸಂಗಾತಿ" ಮುಂದೆ ಕೊಡಗಿನ ಪ್ರತಿ ಗೌಡ ಮನೆ ಮನೆಯ ಸಂಗಾತಿಯಾಗಲೆಂದು ಮೆಚ್ಚುಗೆ ವ್ಯಕ್ತಪಡಿಸಿ, ತಮ್ಮ ಪತ್ರಿಕೆಯ ಮೂಲಕ ಜನಾಂಗ ಮತ್ತು ಭಾಷೆಯ ಅಭಿವೃದ್ಧಿಗೆ ದಾರಿದೀಪವಾಗಲೆಂದು ಹಾರೈಸುತ್ತೇನೆ.

**ಕುದುಪಜೆ ಗಣಪತಿ, ಬೆಂಗಳೂರು**

## ಅರೆ ಭಾಷಿಕ್ ವಿಭಾಗ

# "ಕತ್ತಲೆ ಕಳ್‌ದ್..."

[ಹಿಂದಿನ ಸಂಚಿಕೆಯಿಂದ]

**ಬೇ**ರೆ ಉಪಾಯ ಇಲ್ಲೆ, ಬದ್ಕ್ ಒಳ್ದರೆ ಬೇಡಿ ತಿಂಬೇಂತ ಗ್ರಯ್ಸಿ ಬಡ್ಚಿ ಓಡಿಕೆ ಸುರು ಮಾಡ್ತ್. ಆದರೆ ಹತ್ತ್ ಹೆಜ್ಜೆ ಓಡ್ದರೊಳಗೆ ಉಟ್ಟ್‌ಕಂಡಿದ್ದ ನಾಕ್ ಮೊಳದ ಸೀರೆತುಂಡ್ ಜಾರಿ ಬಿಚ್ಚಿ, ಕಾಲ್‌ಗೆ ಚೊಡ್ಚಿ ಚೋಮಣ್ಣ ಸಾಮಾನ್ ಹೊರೆ ನೊಟ್ಟಿಗೆ ಬುಡ್ಕ್ಯಾಂತಡಾಮರ್ ರೋಡ್‌ನ, ಮೇಲೆ ಸಾಷ್ಟಾಂಗ ಬೀತ್. ಅಷ್ಟ್ ಹೊತ್ತ್‌ಗೆ, "ಓ....ಓಡುತ್ತಾನೆ, ಹಿಡಿಯಿರಿ... ಕಳ್ಳಾ, ಕಳ್ಳಾ, ಹಿಡಿಯಿರಿ..." ಅಂತ ಬೊಬ್ಬೆ ಹಾಕಿಕಂಡ್ ಬೆರ್ಸಿಕಂಡ್ ಬಂದ ಪೋಲೀಸ್ ಹುಕ್ರಪ್ಪಣ್ಣನ ಕೈಗೆ ಚೋಮಣ್ಣ ಸುಲಭಲಿ ಸಿಕ್ಕಿಬೀತ್.

ಹಾಂಗೆ ಪೋಲೀಸ್ ಸ್ಟೇಶನ್‌ಗೆ ಚೋಮಣ್ಣನ ಎಳ್ಕಂಡ್ ಹೋದ ಪೋಲೀಸ್ ಹುಕ್ರಪ್ಪಣ್ಣ ಅಂವಂಗೆ ಹೊಟ್ಟೆತುಂಬ ಸಂಮಾನ ಮಾಡಿ, "ಬಾಳ್‌ಕತ್ತಿ ಮಿನಿ ಇರಬಹುದು ಬೋಳಿಮಗನ ಹತ್ತಿರ" ಅಂತ ಬೋಡಿ ಜೋಬುಗಳ, ಸಾಮಾನ್ ಕಟ್ಟ್‌ನ ಎಲ್ಲ ಜಪ್ತಿ ಮಾಡಿ, ಚಿಲ್ಲರೆ ಕಾಸ್‌ಂದ ಹೆಚ್ಚಿಗೆ ಅವನ ಹಕ್ಕಲೆ ಇಲ್ಲದ್ದ್ ನೋಡಿ ನಿರಾಸೆ ಆಗಿ, ಅಂವನ ಗೋರ್‌ಗೋರ್ ಎಳ್ದ್‌ದ್, ಮೊಗಸಾಲೆಂದ ಆಫೀಸ್ ಕೋಣೆಗೆ ದಾಟುವ ಬಾಗಿಲ್‌ನ ಕರೆಲಿದ್ದ ಕಟ್ಟೆನ ಮೇಲೆ ನೂಕಿ ಹಾಕಿಕುದ್ದಿರ್ಸಿದೊ. ಆ ಕಟ್ಟೆ ಮೇಲೆ ಮುಡಕಟ್ಟಿ ಕುದ್ದ ಚೋಮಣ್ಣನ ಕರೆಗೆ ಬೂಡ್ಸ್‌ಕಾಲ್‌ನ ನೀಚಿ ಇಸಿದ ಪೋಲೀಸ್ ಹುಕ್ರಪ್ಪಣ್ಣ, ಅಂವನ ತಲೆ ಕೂದಲ್‌ನ ಎಡ ಮುಷ್ಟಿಲಿ ಬಿಗಿದ್ ಹಿಡ್ದ್, ಬಲಕೈಲಿ ಗೆಬ್ಬುಗೆ ಎರ್ಡ್ ಅತ್ತ ಇತ್ತ ಮಡ್ಗಿ,

"ಸತ್ಯ ಬೊಗಳು ಬ್ಯಾವರ್ಸಿ, ಆ ಲೇಡೀಸು ಕೊಡೆ ಎಲ್ಲಿಂದ ಕದ್ದದ್ದು ?" ಅಂತ ಮತ್ತೆ ಮತ್ತೆ ಕೇಳ್ದೊ.

"ಅದ್ ನನ್ನ ಹೆಣ್ಣ್ ಶಂಕರಿದ್ ಅಣ್ಣ. ದಮ್ಮಯ್ಯ ನನ್ನ ಬುಟ್ಟ್‌ಬುಡಿ. ನಾ ಕಳ್ಳ ಅಲ್ಲ" ಚೋಮಣ್ಣ ಎಷ್ಟ್ ಕೇಳಿಕಂಡರೂ ಪೋಲೀಸ್ ಹುಕ್ರಪ್ಪಣ್ಣಂಗೆ ನಂಬಿಕೆ ಆಗಲೀ, ಕನಿಕರ ಆಗಲೀ ಒಂದ್ ಚೂರೂ ಹುಟ್ಟೆತ್ಲೆ. ಅವು,

"ಕಳ್ಳ ನನ್ ಮಗನೆ, ನಿಮ್ಮಂತವರನ್ನೆಲ್ಲ ಆರು ತಿಂಗಳೋ, ವರ್ಷವೋ ಜೈಲಿಗೆ ಹಾಕಿದರೇ ಬುದ್ಧಿಬರುವುದು. ಅಂತ ಕಣ್ಣ್ ಕೆಕ್ಕರ್ಸಿ ಹೇಳ್ದೊ.

ಅಷ್ಟ್ ಹೊತ್ತಿಗೆ ಸ್ಟೇಶನ್‌ಲಿ ಇದ್ದ, ಹೊರಗೆ ಹೋಗಿದ್ದ ಎಲ್ಲ ಪೋಲೀಸರೂ ಅಲ್ಲಿ ಗುಂಪ್ ಸೇರಿದ್ದೊ. ತೋರದ, ಸಪುರದ, ಕಪ್ಪನ, ಬೆಳ್ಳಂಗೆನ, ಉದ್ದದ, ಕೆಂಪು ಕಣ್ಣ್‌ನ, ಕೊಟ್ಟೆ ಕಂಣ್‌ನ, ಕೋಸ್ ಕಣ್ಣ್‌ನ, ಕೊತ್ತಿ ಕಣ್ಣ್‌ನ, ಕೊಂಬ ಮೀಸೆನ, ಹಾಂತೆ ಮೀಸೆನ, ಪಿಜಿನ್‌ಧಾರೆನ ಸಪುರ ಮೀಸೆನ, ಉಳ್ಳಿಗಡ್ಡದ, ಕೆದಲ್ ಗಡ್ಡದ ಹೀಂಗೆ ನೂರೊಂದು ದೆವ್ವಗಳ ಹಾಂಗಿದ್ದ ತರಾವರಿ ಪೋಲಿಸ್‌ಗ ಚೋಮಣ್ಣನ ಮೇಲೆ ಅಮರಿಬಿದ್ದ್‌ದ್ ಥರಥರ ಆಲ್ಲಾಡ್ಸಿಬುಟ್ಟೊ. ಆಚೆ ಈಚೆ ದಾಟ್‌ಕನ, ಮೊಗಸಾಲೆಂದ ಆಫೀಸ್‌ಕೋಣೆಗೆ ಹೋಕನ ಒಮ್ಮೆ, ಆಫೀಸ್‌ಕೋಣೆಂದ ಮೊಗಸಾಲೆಗೆ ಬಾಕನ ಇನ್ನೊಮ್ಮೆ, "ತಕೋ, ಸ್ಟೇಷನ್ ಮರ್ಯಾದೆ" ಅಂತ ಚೋಮಣ್ಣನ ಮುಸ್‌ಂಡ್ ಮೇಲೆ ಆ ಪೋಲೀಸರ್ ಹೊಡ್ಬ್ ಹೊಡ್ದ್ ಹಿಂಬೊತಾಕನ ಅಂವನ ಕೆಪ್ಪೆ ಸ್ಪರ್ಶಜ್ಞಾನವೇ ಕಳ್‌ಕಂಡತ್, ಹುಳ ಹಿಡ್ಬ್ ಆಗಾಗ ಬೇನೆ ಆಗಿ ನಿದ್ದೆ ಹಾಳ್ ಮಾಡ್ತಿದ್ದ ಎಡದವುಡೆನ ಕೆಳಗೆನ ಸಾಲ್‌ನ ಕೊಡೀಂದರ್‌ಂದ ಈಚಿನ ಹಲ್ಲ್ ಬೇನೆ ಸತ್ತ್‌ದ್ ಗಲಗಲ ಆಡಿಕೆಸುರುಆಗಿತ್ತ್... ಅಂವ ಯಾರ್ ? ಎಲ್ಲಿಂದ ಬಂದದ್? ಯಾಕೆ ಬಂದದ್? ಹೋದು ಎಲ್ಲಿಗೆ? ಇರ್ದು ಯಾಕೆ? ವಾಸ್ತವದ ಪ್ರಜ್ಞೆ ಕಾಣೆ ಆಗಿ ಅದರಜಾಗಲಿ ಈ ಥರದ ಆಧ್ಯಾತ್ಮಿಕ ಪ್ರಶ್ನೆನೂ ಅಲ್ಲದ, ವೈಜ್ಞಾನಿಕ ಪ್ರಶ್ನೆನೂ ಅಲ್ಲದ, ಅಸ್ತಿತ್ವದ ಮೂಲಭೂತ ಪ್ರಶ್ನೆನೂ ಅಲ್ಲದ, ನೂರಾರ್ ಅರ್ಥ ಕಳ್‌ಕಂಡ ಪ್ರಶ್ನೆಗ ಹುಟ್ಟೆಕಂಡೊ. ಇಂಥ ಒಂದ್ ಭ್ರಮಾತ್ಮಕ ಪರಿಸ್ಥಿತಿಲಿ ಅಂವನ ಕಾದ್‌ಕಂಡ್ ಇರ್ದ ದೊಡ್ಡ, ಸಣ್ಣ ಧಣಿಗಳ ಕೋಪ ಕಾತರ, ಅಪ್ಪ ಸಣ್ಣಕ್ಕಂದರ ನಿರಾಸೆ ಬೇಜಾರ್, ಹೆಣ್ಣ್ ಶಂಕರಿನ ಬೇನೆ ಕಣ್ಣೀರ್ ಯಾವುದೂ ಅವನ ಗ್ರಹಿಕೆಗೆ ಸಿಕ್ಕೆತ್ಲೆ. ಕತ್ತಲೆ ಬೊಳ್ಪು, ಸತ್ಯ–ಸುಳ್ಳು, ಸಂತೋಷ ದುಕ್ಕ ಇವೆಲ್ಲದರ ನಡುನ ಕೂದಲೆಳೆನ ವ್ಯತ್ಯಾಸ ಇಲ್ಲದಾಂಗೆ ಆದ ಅಂವಂಗೆ ಹಿಂಬೊತ್ ಕಳ್ದ್ ಕತ್ತಲೆ ಅಡರ್‌ದಾಗಲೀ, ಕಬ್ಬಿಣದ ಬಾಗಿಲ್‌ನ ಒಳಗೆನ ಕೋಣೆಗೆ ಅಂವನ ನೂಕಿ ಬೀಗ ಹಾಕಿದಾಗಲೀ, ಇರ್ಲ್ ಮುಗ್ದ್ ಬೊಳ್ಪುಆದದ್ದಾಗಲೀ ಯಾವುದು ಗೊತ್ತಾತ್ಲೆ. ಅಷ್ಟೇ ಅಲ್ಲ, ಆ ದಿನ ಅಂವನ ದೊಡ್ಡಪೇಟೆಗೆ ಕರ್ಕಂಡ್ ಹೋಗಿ ಕೋರ್ಟ್‌ಲಿ ಹಾಜರ್ ಮಾಡ್ದಾಗಲೀ, ಅಲ್ಲಿ ಎತ್ತರಲಿ ಕುದ್ದಿದ್ದವ್ರು ಅವನ ಹದ್ನೈದು ದಿನ ಕಸ್ಟಡಿಗೆ ಕಳ್ಸಿದಾಗಲೀ ಸಹ ಅಂವಂಗೆ ಗೊತ್ತಾತ್ಲೆ.... ಮತ್ತೆ, ದೊಡ್ಡ ದಣಿಗ, ಸಣ್ಣದಣಿಗ, ಅವರ ನೆಂಟ್ರ್‌ಗ, ಅವರ ಕೆಲ್ಸದವ್ ಎಲ್ಲ ಸೇರಿ ಚೋಮಣ್ಣಂಗಾಗಿ ಕೆರೆ, ಬಾವಿ ಹುಡ್ಕಿದ್, ಪೇಟೆಗೆ ಬಂದ್‌ದ್, ಎಲ್ಲವರೊಟ್ಟಿಗೆ ವಿಚಾರ್ಸಿದ್, ಅಕೇರಿಗೆ ಬೇರೆ ದಾರಿ ಇಲ್ಲದೆ ಕಾಣೆ ಅರ್ಜಿ ಕೊಡಿಕೆ ಪೋಲೀಸ್ ಸ್ಟೇಶನ್‌ಗೆ ಬಂದಾಕನ ಎಲ್ಲ ವಿಚಾರ ಗೊತ್ತಾದ್... ಅದೆಲ್ಲ ಅಂವಂಗೆ ಗೊತ್ತಾವ ಸಾಧ್ಯತೆನೂ ಇತ್ಲೆ.

● **ಕೆ. ಆರ್. ವಿದ್ಯಾಧರ,**
ಎಸ್. ಹೊಳ್ಳ ಸಂಕೀರ್ಣ
ಜ. ತಿಮ್ಮಯ್ಯ ವೃತ್ತ
ಮಡಿಕೇರಿ, ಕೊಡಗು

# ಚಾಂಪನ ಕಥೆ ಹಂಗೆ, ಚಾಮೆವ್ವನ ಕಥೆ ಹಿಂಗೆ

**ಕಾ**ಟವೊಟ್ಟೆ ಚಾಂಪನಲ್ಲಿಗೆ ಹೋಗದೆ ಐದಾರ್ ತಿಂಗ ಆಗಿತ್ತ್. ಆ ಕುಂದು ಕೊಡಿಗೆ ಹೋಗಿ ಬಾದುಂತೇಳಿರೆ ಹಿಮಾಲಯನೇ ಹತ್ತಿ ಇಳ್‌ದಷ್ಟ್ ಕಷ್ಟ ಆದೆ. ಮಳೆಗಾಲಲಿ ಹೋದರಂತೂ ಉಂಬುಳುಗ ಒಂದು ಪಾವುಗೆ ಕಮ್ಮಿ ರಕ್ತ ಕುಡಿಯುದುಲೆ. ಕೈಲ್‌ಮುಹೂರ್ತಲಿ ಬಟ್ಲೆಟ್ಟ್ ಹಂದಿಗೈಪ್ "ಕಾಣದ ನಾಯಿ ಕಡ್‌ಂಬಿಟ್ಟ್ ತಿಂದ್ದಂಗೆ" ತಿಂದ್ ಕಾರಟ, ಸೂರಾಟ ಹಿಡ್ದ್ ಚಟ್ಟಕಟ್ಟೆಕೆ ಆಗಿತ್ತ್. ಆಗ ಚಾಂಪನ ನೋಡಿ ಬಂದ ಮೇಲೆ ಮೊನ್ನೆ ಶನಿವಾರದಿನ ಹೋಗಿದ್ದೆ. ಹೋಗಿ ಎತ್ತ್ ಕಾಕನೇ ಕತ್ತಲೆ ಆಗಿತ್ತ್. ಅಲ್ಲಿ ಬ್ಯಾರೆ ಚಾಂಪನ ಸಣ್ಣ ಸೊಸೆಗೆ ಅಡಿಗೆ ಮಾಡಿಕೆ ಬಾದುಲೆ. ದೊಡ್ಡ ಸೊಸೆನೋ "ನಿನ್ನ ಕಡೆವು ನೆಂಟ್ರ್ ಬಂದದ್ ನೀನೇ ಅಡಿಗೆ ಮಾಡಂತೇಳಿ" ಕ್ವಾಂಬರೆಗೊಮ್ಮೆ, ಅಡಿಗೆ ಮನೆಗೊಮ್ಮೆ ಹೋಕೆ ಸುರು ಮಾಡ್ತ್. ನಂಗಂತೂ ಹೊಟ್ಟೆಹಸ್ತ್ ತಡಿಯಕೆ ಬತ್ತಾಗಿತ್ತ್. ಗಂಟೆ ಒಂಬತ್ತಾದರೂ ಇವು ಊಟ ಕೊಡುವ ಲೆಕ್ಕಲಿಲ್ಲೆ. ಅಷ್ಟೊತ್ತಿಗೆ ಚಾಂಪದ್ ಪರ್ಚಾಟ ಸುರಾದರ್‌ಂದ ಊಟಕ್ಕೆ ರೆಡಿಯಾತ್. ಊಟ ಆದಂಗೆ ಚಾಂಪಂದ್ ಹಳೆ ಜಾತಿ ಬ್ಯಾಟೆ, ಮೀನ್ ಬ್ಯಾಟೆ, ನನ್ನ ಯೌವ್ವನಲಿ ಹಂಗೆ ಮಾಡ್ದೆ, ಹಿಂಗೆ ಮಾಡ್ದೆ ತೇಳಿ ಕಥೆ ಹೇಳಿಕೆ ಸುರಾತ್. ನಂಗೆ ಬ್ಯಾರೆ ನಿದ್ರೆ ಬಾಕೆ ಸುರಾತ್, ಹೆಂಗಾದರ್ ಮಾಡಿ ಮಾತ್ ತಪ್ಪಿಸಕೊಲಂತೇಳಿ ಲೋಕಸಭೆ ಎಲೆಕ್ಷನ್ ಹತ್ರ ಬಾತಲ್ಲತ ಹೇಳಿಬುಟ್ಟೆ. ಅಷ್ಟೇ ಹೆಳ್ದ್, ಚಾಂಪ ಸುರುಮಾಡಿಬುಟ್ಟ್‌ತ್. "ಈ ಸಲ ಓಟ್ ಕೇಳಿಕೆ ನಮ್ಮ ಮನೆಗೆ ಯಾವುದಾರ್ ಪಕ್ಷದವು ಬರ್ಲಿ. ಅವರ ಹಂಗೆ ಮಾಡಿಬುಟ್ಟನೆ, ಹಿಂಗೆ ಮಾಡಿಬುಟ್ಟನೆ"ಂತೇಳಿ ಅರ್ಧಗಂಟೆ ಬೈತ್. ಊಟಕ್ಕೆ ಮುಂದೆ ಏರಿಸಿದ ಕಳ್ಳ್ ಈಗ ತಲೆಗೆ ಹತ್ತಿಬುಟ್ಟತ್. ಅಂತು ನಾನ್ ಕೇಳ್ದೆ "ಅವು ನಿಮಿಗೆ ಏನ್ ಮಾಡ್ದೊ ಯಾಕೆ ಹೀಂಗೆ ಬಯ್ಯುತೊಳರಿ" ಆಗ ಚಾಂಪ "ನಾನ್ ಬಯ್ಯುದು ಮಾತ್ರ ಅಲ್ಲ, ನೆನಸಿಕಂಡರೆ ಅವರ ಹಸಿ ಹಸಿ ತಿನ್ನಕುತ ಅನ್ನಿಸಿದೆ. ಹೋದಸಲ ಎಲೆಕ್ಷನ್‌ಲಿ ಓಟ್ ಹಾಕಿಕೆತೇಳಿ ಬಾರಿ ಜೋರಾಗಿ ಕೈ ಮೇಲೆ ಹಿಡ್‌ಕಂಡ್ ಒಳ್ಳೆ ಮಿನಿಷ್ಟ್ರ ಕರ್‌ಕಂಡ್ ಹೋಗುಮಂಗೆ ಜೀಪುಲಿ ಕುದ್ದ್‌ರಿಸಿ ಕರ್‌ಕಂಡ್ ಹೋಗಿಬುಟ್ಟೊ, ಓಟ್ ಹಾಕಿ ಹೊರಗೆ ಬಂದ್ ನೋಡಿರೆ ಇತ್ತ ಕರ್‌ಕಂಡ್ ಹೋದ ಜನನು ಇಲ್ಲೆ, ಅತ್ತ ನೋಡಿರೆ ಜೀಪುನು ಕಾಂಬದುಲೆ, ನಂಗೆ ಹುಷಾರ್ ಬ್ಯಾರೆ ಇತ್ತ್‌ಲ್ಲೆ. ಆ ಉರಿಬಿಸಿಲ್‌ಲಿ ಮೊಟ್ಟೆ ಹತ್ತಿ ನಡ್ಕಂಡ್ ಬಂದ್ ನನ್ನ ಪಾಡ್ ನಂಗೂ, ಆ ದೇವ್ರಿಗೇ ಗೊತ್ತು. ಈ ಸಲ ಮಾತ್ರ ಹಾಸಿಗೆಂದ ಏಳಕುತ್ತಾದರೆ ಪಸ್ಟಲೇ ನೂರು ರೂಪಾಯಿ ಕೊಡಕು. ಇಲ್ಲದಿದ್ದರೆ ಓಟ್ ಹಾಕಿಕೆ ಹೋದುಲೆ. ಊರು ಹೋಗ್‌ಂತೇಳ್‌ತುಟ್ಟ್,ಕಾಡ್ ಬಾಂತೇಳ್ ತುಟ್ಟ್. ಯಾರ್ ಗೆದ್ದರೂ, ಸೋತರು ನಂಗೇನ್‌ತೇಳಿ ಚಾಂಪ ಗೊರಕೆ ಹೊಡ್ದ್ ನಿದ್ದೆ ಮಾಡ್ತ್. ಸ್ವಾಮಿತೇಳಿ ನಾನು ನಿದ್ದೆ ಮಾಡ್ದೆ.

ಚಾಂಪನ ಕಥೆ ಹಂಗೆ ಆದರೆ ಮಗಳ ಮನೆಲಿರುವ ಚಾಮೆವ್ವನ ಕಥೆ ಹಿಂಗೆ. ಹೋದ ಸಲ ಎಲೆಕ್ಷನ್‌ಲಿ ನನ್ನ ಹೆಸರಂತೂ ಓಟ್ ಲಿಸ್ಟ್‌ಲಿ ಬಂದಿತ್ತ್‌ಲೆ. ಅಂದರೂ ಹೆಂಗಾರ್ ಮಾಡಿ ಯಾವುದಾದರ್ ಹೊಟ್ಟೆ ಪಕ್ಷ ಸೇರಿಕಂಡ್ ಒಳ್ಳೆ ಒಂದು ಬಿರಿಯಾನಿ ಊಟ ಹೊಡೆಯನೋಂತೇಳಿ ಮಧು ಹೈದನ ಕರ್‌ಕಂಡ್ ಹೋಕಾಕನೆ ಎಲ್ಲಕ್ಕಿಂತ ಮುಂದೆ ಓಟ್ ಹಾಕಿ ದಾರಿಲಿ ಬರುತ್ತಟ್ಟ್. ನಾನ್ ಕೇಳ್ದೆ "ಯಾವ ಚಿಹ್ನೆಗೆ ಓಟ್ ಹಾಕಿದರಿ ಚಾಮೆವ್ವ" ಆಗ ಚಾಮೆವ್ವ "ಯಾರಿಗೆತೇಳಿ ಓಟ್ ಕೊಡ್ದೊ ಪಿಳ್ಳೆ. ಒಬ್ಬಂಗೆ ಓಟ್‌ಕೊಟ್ಟರೆ ಒಬ್ಬಂಗೆ ಆದುಲೆ ಅದಿಅ ಮೂರು ಚಿಹ್ನೆಗೂ ಓಟು ಹಾಕಿದೆ." "ಅದ್ಯಾಕೆ ಚಾಮೆವ್ವ ನೀವು ಹಂಗೆ ಮಾಡಿಬುಟ್ಟರಿ"ಂತ ಕೇಳ್ದೆ. ಅದಿಕೆ ಚಾಮೆವ್ವ "ನನ್ನ ದೊಡ್ಡ ಮಜ ಕಾಂಗ್ರೆಸ್ಸಿಗೆ ಓಟು ಕೊಡಕುತ ಹಠ. ಅವನ ಬುಡಿಕಾದುಲೆ. ಎರಡನೆ ಮಜಂದ್ ಬಿ.ಜೆ.ಪಿ.ಗೆ ಕೊಡಕುತ ಹಠ. ಇನ್ ಅಳಿಯನ ಬುಡಿಕೆ ಆದ್ಯಾ, ಅಳಿಯಂದ್ ಜನತಾ ದಳ. ಯಾರ್‌ನತೇಳಿ ಬುಡ್ಡ್, ಅದಿಕೆ ಯಾರ್ದ್ ನಿಷ್ಟುರ ಬ್ಯಾಡತೇಳಿ ಮೂರು ಜನ್ರ ಪಾರ್ಟಿಗೂ ಎಲ್ಲವುಕೂ ಒಂದೊಂದು ಓಟ್ ಹಾಕಿದೆ" ಚಾಮೆವ್ವನ ಈ ಮಾತ್ ಕೇಳಿ ಇತ್ತ ನೆಗಾಡ್‌ದಂಗಲ್ಲ, ಅತ್ತ ಮರ್‌ಟಂಗಲ್ಲದಂಗೆ ಆಗಿ ಹೋತ್.

ನಿಮ್ಮ ಕಡೆ ಎಲ್ಲಾದರ್ ಇಂತಹ ಚಾಂಪ ಚಾಮೆವ್ವಂಗ ಇದ್ದರೆ ಒಂದು ಓಟ್‌ದ್ ಮೌಲ್ಯನ ಲಾಯಿಕ್ಕಾಗಿ ಕಿವಿಗೆ ನಾಟುವಂಗೆ ಕಿವಿ ಕೇಳದಿದ್ದರೆ ಕಿವಿ ಹತ್ರ ಜೋರಾಗಿ ಹೇಳಿಕೊಡಿ.

**ಅನೆ ಬೆಳ್ಯಪ್ಪ ಶೇಖರ್, ಚೆಟ್ಟಿಮಾನಿ**

## ನಗೆಹನಿ

1. ಗುರು : ಈ ದಿನ ಸಂಜೆ ಸೂರ್ಯನ ಮೇಲೆ ಭಾಷಣ ಇದೆ. ಎಲ್ಲರು ತಪ್ಪಿಸಿಕೊಳ್ಳದೆ ಬರಬೇಕು.
   ಶಿವು : ನಮ್ಮ ತಾಯಿಗೆ ನಾನು ಒಬ್ಬನೆ ಮಗ. ನನ್ನನ್ನು ಅಷ್ಟು ದೂರ ಕಳಿಸೋಕೆ ಅವರು ಒಪ್ಪೋಲ್ಲ ಸಾರ್.

2. ರಾಮು : ನೀನು ಹುಟ್ಟಿದ ನಕ್ಷತ್ರ ಯಾವುದು ?
   ಮಾರ : ನಾನು ಹುಟ್ಟಿದ್ದು ಹಗಲು ಹೊತ್ತಿನಲ್ಲಿ ಆಗ ನಕ್ಷತ್ರಗಳು ಇರಲಿಲ್ಲ.

**ಪಿ. ಯು. ಗೌತಮ್, ಅಮಂದೂರು**

# ಹ ರ ಟೆ

ನಿಮ್ಮನ್ನ ಕಾಂಬದೆ ತುಂಬ ದಿನಾತಲ್ಲ? ಬಾಳ ಕೆಲ್ಸಲಿ ಒಳರಿ ಕಂಡದೆ? ಅಲ್ಲ, ಈ ದಿನಗ ಎಷ್ಟ್ ಬೇಗ ಬೇಗ ಓಡ್ದೇಂತಾ ? ಇಂದ್‌ನಾಳೇಂತೇಳ್ಕನ ಹದ್ನೈದ್ ದಿನ ಬಂದೇ ಬುಟ್ಟದೆ. 'ಕೊಡಗು ಸಂಗಾತಿ' ಓದವ್ಕೆ ಹದ್ನೈದ್ ದಿನ ಯಾಗಪ್ಪಾ ಬಾಡೊಂತ ಆದು. ಆದರೆ ಈ ಪುಸ್ತಕ ಮಾಡವ್ಕೆ ಮಾತ್ರ ಹಗಲಾದೂ, ರಾತ್ರಿ ಆದೂ ಒಂದೂ ಗೊತ್ತಾಕಿಲೆ. ಹೌದು. ನಮ್ಮನ್ನ ನಾವು ಯಾವುದಾರ್ ಕೆಲ್ಸಲಿ ತೊಡಗಿಸಿಕಂಡರೆ ಹಿಂಗೇ ಆದು. ಆದರೆ ನಾವ್ ಗ್ಯಾನ ಇಸಿಕಣೊಕು, ಇಂದ್‌ನಾಳೆ ತುಂಬಾ ಬೆಲೆ ಇರುವಂಥಾದ್‌ತ. ಮುತ್ತು ಏನಾರಾ ಹಾಳಾದರೆ ಹುಡ್ಕಿರೆ ಸಿಕ್ಕುದು. ಆದರೆ ಕಳ್‌ಕಂಡ ಹೊತ್ತು ಮಾತ್ರ ಸಿಕ್ಕುದ್ಲೆ.

ಇಂದ್ ನಾಳೇಂತೇಳ್ಕನ ಮಕ್ಕ ದೊಡ್ಡ ವಾದವೆ. ಮೀಸೆ ಬೆಳ್ದಂಗೆ ಆಸೆನೂ ಬೆಳ್ದದೆ. ಅದರೊಟ್ಟಿಗೆ ಬುದ್ಧಿನೂ ಬೆಳ್ದಿದ್ದರೆ ಒಳ್ಳೆ ದಿತ್ತ್. ಕೆಟ್ಟದರ ಬೇಗ ಕಲ್ತವೆ. ಒಳ್ಳದ್ ಮಾತ್ರ ಸುತಾರಾಂ ತಲೆಗೆ ನುಗ್ಗುದ್ಲೆ. ನೂಲು ಲಾಯ್ಕು ಇದ್ದರೆ ಒಳ್ಳ ಸೀರೆ ನೆಯ್ಯಕ್. ನೂಲೆ ಲಾಯ್ಕ ಇಲ್ಲದಿದ್ದರೆ ? ಹಂಗೆ ನಮ್ಮ ನಮ್ಮ ಪರಿಸರ ಲಾಯ್ಕ ಇದ್ದರೆ ಅಲ್ಲಿ ಇರವೂ ಒಳ್ಳವೇ ಆಗಿದ್ದವೆ. ಎಷ್ಟೋ ಜನ ಅಪ್ಪ-ಅವ್ವ ಮಕ್ಕಳ ಮುಂದೆ ಎಷ್ಟ್ ಕೆಟ್ಟದಾಗಿ ಬಯ್ದುವೆ. ಆ ಮಕ್ಕಳೂ ಅದೇ ರೀತಿ ಬಯ್ದಾಡಿಕಂಡವೆ. ಅದ್ಕೆ ಹೇಳ್ದು ಟ್ಯಾಂಕ್‌ಲಿ ಯಂಥ ನೀರುಟ್ಟೋ ಅಂಥಾ ನೀರೆ ಟ್ಯಾಪುಲೂ ಬಾದುತ.

ಅದೆಲ್ಲ ಇರ್ಲಿ, ಈ ವರ್ಷ ಬತ್ತ ಕೆಲವ್ಕೆ ಜಾಸ್ತಿ ಆವುಟುಗಡ. ಒಳ್ಳೆ ಸುದ್ಧಿ. ಏನಾರಾಗಲಿ ನಾಕ್‌ಕಾಳ್ ಜಾಸ್ತಿ ಆತ್‌ಂತೇಳ್ಳು ಕೇಳಿ ಖುಷೀ ಆತ್. ಮಿಲ್ಲ್‌ಗೆ ಬತ್ತ ತಕ್ಕಂಡ್ ಹೋಗಿ ಅಕ್ಕಿ ಮಾಡ್ಸಿಕಂಡ್ ಬಂದವೆ. ಆ ಅಕ್ಕೀಲಿ ಎಷ್ಟ್ "ಅರ್ಧ ದಾರೀಲೇ ಮಾರಾಟ" ಆದೆಯೋ ಯಾರಿಗೆ ಗೊತ್ತು ? ಕೆಲವರ ಎತ್ತ್ ಮಾರಿ ಆತ್ ಗಡ. ಹೆಂಗೂ ಗೋಣಿಕೊಪ್ಪಲಿ ಮಾರ್ಕೆಟ್ ಉಟ್ಟಲೆ. ಜೋರು ಮಳೆ ಬಾಕನ ಮೆಲ್ಲ ಹೋಗಿ ಹೊಸ ಲಾಚಾರ್ ಎತ್ತ್‌ನ ತಕಂಡ ರಾತ್ ! ?

ಮೊನ್ನೆ ನಮ್ಮ ಇಂವ ಕಾಂಬಕೆ ಸಿಕ್ಕಿತ್. ನಾಕೇಳ್ದೆ "ಕೊಡಗು ಸಂಗಾತಿ" ನಿಂಗೆ ಬರ್‍ತಾ ಉಟ್ಟಾತ. ಹೌದು ಮಾರಾಯಾ,ಅಂದ್‌ಂದ್ಲೇ ಬರ್‍ತಾ ಉಟ್ಟು.ಓದಿಕೆ ಖುಷಿ ಆದೇಂತ ಮೊಕನ ಭೂಮಿಯಷ್ಟ್ ಅಗಲ ಮಾಡಿ ಹೇಳ್ತ್. ದುಡ್ಡು ಕಳ್ಸಿಯೊಳಾಂತ ಕೇಳ್ದೆ. "ಇಲ್ಲೆ"ಂತ ಹೇಳ್ತ್. "ಅಯ್ಯೋ ಮಾರಾಯ ಪುಕ್ಸಟೆ ಗಂಡ ಹೊಟ್ಟೆತುಂಬ ಉಂಡಾಂತ" ಮಾಡ್‌ಬಡ, ಕೂಡ್ಲೆ ಹಣ ಕಳ್ಸೂಂತ ಹೇಳ್ದೆ.

○ **ಬಿ.ಆರ್. ಜೋಯಪ್ಪ,** ಮಡೆ

## ಯಾರ ದೇವರಿಗೆ ಶಕ್ತಿ ಹೆಚ್ಚ್‌ಂತ

ಒಂದ್ ಊರ್‍ಲಿ ಮೂರ್ ಜನ ಸ್ನೇಹಿತರ್ ಇದ್ದೊ. ಅವರ್‍ಲಿ ಒಬ್ಬ ಹಿಂದೂ, ಇನ್ನೊಬ್ಬ ಮುಸ್ಲಿಂ, ಮತ್ತೊಬ್ಬ ಕ್ರೈಸ್ತ. ಇವು ಬಾಳ ದೋಸ್ತಿಗ ಆಗಿದ್ದೊ. ಒಂದಿನ ಹಿಂದೂ ಹೇಳ್ತ್, ನನ್ನ ದೇವರಿಗೆ ಬಹಳ ಶಕ್ತಿಂತ. ಅಷ್ಟೊತ್ತಿಗೆ ಮುಸ್ಲಿಂ ಹೇಳ್ತ್ ನಿನ್ನದ್ ಎಂತ 48 ದೇವರ್‌ಗ. ನನ್ನದ್ "ಅಲ್ಲಾ" ಒಬ್ಬನೆ. ಅವಂಗೆ ಶಕ್ತಿ ಹೆಚ್ಚ್. ಅಷ್ಟೊತ್ತಿಗೆ ಕ್ರೈಸ್ತ ಹೇಳ್ತ್, ಎಲ್ಲಾ ದೇವರ್‌ಗಿಂತ ನನ್ನ ದೇವರ್‌ಗೆ ಶಕ್ತಿ ಹೆಚ್ಚ್‌ಂತ. ಆಗ ಅವರಲ್ಲಿ ಜಗಳ ಸುರಾತ್.ಜನ ತುಂಬಾ ಸೇರ್ದೊ, ಒಂದು ಸಭೆ ನಡ್ಸಿದೊ. ಅಲ್ಲಿ ಒಂದು ಏರ್ಪಾಡ್ ಮಾಡ್ದೊ. ಏನ್‌ಂತ ಗೊತ್ತುಟಾ ? ಅಲ್ಲಿ ಒಂದ್ ದೊಡ್ಡ ಮರ ಉಟ್ಟಲ್ಲ! ಅದ್ಕೆ ಹತ್ತಿ ಕೆಳಗೆ ಹಾರಕುತಾ. ಅಷ್ಟೊತ್ತಿಗೆ ಅವರ ಹೆಣ್ಣ್ ಮಕ್ಕ ಮುರ್ಡಿಕೆ ಸುರು ಮಾಡ್ದೊ. ಮೊದ್ಲು ಮುಸ್ಲಿಂದ್ ಸರದಿ ಬಾತ್. ಅಂವ ಮರ ಹತ್ತಿ "ಅಲ್ಲಾ"ಂತೇಳಿ ಕೆಳಗೆ ಹಾರ್ತ್. ಆಗ ಅವನ ಅಲ್ಲಾ ಕಾಪಾಡ್ತ್. ಮತ್ತೆ ಕ್ರೈಸ್ತನ ಸರದಿ ಬಾತ್. ಅವನೂ ಮರ ಹತ್ತಿ ಹಾರ್‌ಕಾಕನ "ಏಸೂ"ಂತೇಳಿ ಹಾರ್ತ್. ಆಗ ಅವನ ಏಸು ಕಾಪಾಡ್ತ್. ಕೊನೆಗೆ ನಮ್ಮ ಹಿಂದೂ ಮರ ಹತ್ತಿ ಹಾರ್ತ್. ಹಾರ್‌ಕಾಕನ "ಬ್ರಹ್ಮ, ವಿಷ್ಣು, ಮಹೇಶ್ವರ"ಂತೇಳಿ ಹಾರ್ತ್. ಆಗ ದೇವರಿಗೆ ಜಗಳ ಹತ್ತಿಕಂಡದೆ. ನಿನ್ನ ಫಸ್ಟ್ ಹೇಳ್ದ್, ನಿನ್ನ ಫಸ್ಟ್ ಹೇಳ್‌ದ್‌ಂತ. ಇಷ್ಟಾಕಾಕನ ಹಿಂದೂ ಬಿದ್ದ್ ಸತ್ತ್ ಹೋತ್. ಅದ್ಕೆ ಹೇಳ್ದು ಒಂದೇ ದೇವರ್‌ನ ಪೂಜೆ ಮಾಡಕೂಂತ.

**ಅನು ಸಿ. ಜಯಕುಮಾರ್, ಚೆಟ್ಟಿಮಾನಿ**

## ನಗೆಹನಿ

ಟೀಚರ್ : ಯಾಕೆ ಕಿರಣ್ ಶಾಲೆಗೆ ಬಾತ್ಲೆ ?

ಕಿರಣ್ : ಪಿಕ್ಚರ್ ನೋಡಿಕೆ ಹೋಗಿದ್ದೆ ಮೇಡಂ

ಟೀಚರ್ : ನಾಳೆ ಭಾನುವಾರ ಹೋಗಕಾಗಿತ್ತಲ್ಲ

ಕಿರಣ್ : ನೀವೆ ಹೇಳಿದಲ್ಲ ಮೇಡಂ ಇಂದ್‌ನ ಕೆಲ್ಸನ ಇಂದೇ ಮಾಡಕೂತ. ಅಲ್ಲಿ 'ಇಂದೇ ನೋಡಿತ' ಇತ್ತ್ ಅದ್ಕೆ ಹೋದೆ ಮೇಡಂ

**ಮಳ್ಳನ ಎಸ್. ವಸಂತ್ (ವಿನು),** ಮುಕ್ಕಂದೂರು

# ಹೆಣ್ಣ್‌ನ ಶೀಲಕ್ಕೆ ಸಿಕ್ಕಿದ್ ಬರೀ ಎರಡೂವರೆಸಾವಿರ ರೂಪಾಯಿ

**ಬೆಳ್ಳಿನೊಟ್ಟಿಗೆ** ಹೋಗ್ ತ್ತಿದ್ದ ಕುಸುಮಂಗೆ ಹಿಂದೆ ಬರ್ ತ್ತಿದ್ದ ನಾಕ್ ಜನ್ರ ನೋಡಿ ತಲೆ ಮೇಲೆ ಮರ ಬಿದ್ದಂಗಾತ್. ಕಿರ್‌ಚಿಕೆ ಬಾಯಿ ತೆಗೆಯ ಕೂತ ಗ್ಯಾನ ಮಾಡ್ರೆ ಬಾಯಿಗೆ ಚೌಕ ತುರ್ಕಿಬುಟ್ಟ್ಳೋ. ಅವ್ಳ ಸ್ಥಿತಿ ಯಾರಿಗೆ ತಾನೇ ಹೇಂಗೆ ಗೊತ್ತಾಕು ? ಅಂತೂ ಗುಬ್ಬಿಮ್ಯಾಲೆ ಬ್ರಹ್ಮಾಸ್ತ್ರ ಬುಟ್ಟಂಗೆ 5 ಜನ ಸೇರಿಕಂಡ್ ಕುಸುಮನ ಸುಮದಂಥ ಶರೀರನ ಮುಂಬಿಗ ರಸಹೀರಿ ಬುಡುವಂಗೆ ಕಾಮದಾಟ ಆಡಿ ಅವ್ಳ ಬಾಳೆ ಹಾಳು ಮಾಡಿಬುಟ್ಟೊ.

ಇದ್ ಹೆಂಗಾದ್‌ತ ನಿಮಿಗೆಲ್ಲಾ ಆಶ್ಚರ್ಯ ಆಗಿರ್ಬ್ ಅಲ್ಲಾ ? ಒಂದಿನ ಕುಸುಮ ತನ್ನ ಅಕ್ಕನ ಮನೆಗೆ ಹೋಕುಂತೇಳಿ ಅಮ್ಮ ಅಪ್ಪನ ಕೇಳಿ ಮನೆಂದ ಮಧ್ಯಾಹ್ನದ ಬಸ್‌ಗೆ ಹೊರಟತ್. ಅವ್ಳ ಅಮ್ಮ ಅಪ್ಪ ಸ್ವಲ್ಪ ಪೆದ್ದರೊ ಏನೊ. ಅಂತೂ ಅವ್ಳದುರಾದೃಷ್ಟ ಅವ್ಳುಓದಿದ್ ಸ್ವಲ್ಪನೆ. ಮತ್ತೆ ಕೇಳೊಕಾ? ಇನ್ನ್. ಗೂಡೆ ಕೊಂಗಳ್ಳಿಲಿ ಇಳಿಯ ಕಾಯ್ತ್. ದುರಾದೃಷ್ಟ ತೇಳ್ರೆ ನಿದ್ರೆ ಮಾಡ್‌ತ್ತಿದ್ದ ಕುಸುಮಂಗೆ ಎಚ್ಚರಾದ್ ಅಕ್ಕನ ಊರ್ ದಾಟದ ಮ್ಯಾಲೆ. ಅವ್ಳ ಮೊದ್ಲೆ ಕಂಡೆಕ್ಟರ್‌ಗಾದ್ರೆ ಕೊಂಗಳ್ಳಿ ಬಾಕನ ನಂಗೆ ತಿಳಿಸಿಂ ತೇಳಿದ್ರೆ ಆಗಿತ್ತ್. ಅದೂ ಹೇಳ್‌ತ್ಲೆ. ಅಲ್ಲದೆ ಸ್ವಲ್ಪ ತಿಳುವಳಿಕೆ ಇಲ್ಲೆ ಗೂಡೆಗೆ.

ಒಮ್ಮೆಲೆ ಎಚ್ಚರಾದವಳಿಗೆ ಒಂದೆ ಸರಿ ಹೆದ್ರಿಕೆ ಸುರಾತ್. ಅಂತೂ ಸ್ವಲ್ಪ ಧೈರ್ಯ ಮಾಡಿಕಂಡ್ ಯಾರ್ನಾದರೂ ಕೇಳ್ನಾತ ಬಸ್ ಇಳ್ತ್. ಆಗಳೆ ಆರೂವರೆ ಗಂಟೆ ಆಗಿ ಬುಟ್ಟಿಟು. ಗೂಡೆ ಹೆದ್ರಿಕಂಡ್ ಅಲ್ಲೇ ಹಕ್ಕಲೆ ಇದ್ದ ರಾಘವಯ್ಯನ ಅಂಗಡಿಯ ಮರ್ನ ಕೇಳ್ತ್. ಎಂಥ ಮಾಡ್ದ ನಾನ್ ಕೊಂಗಳ್ಳಿಲಿ ಇಳಿಯಕಾಯ್ತ್. ಆದ್ರೆ ಬಸ್‌ಲಿ ನಿದ್ರೆ ಮಾಡ್‌ತ್ತಿದ್ದರ್‌ಂದ ನಂಗೆ ಗೊತ್ತಾತ್ಲೆ ಅಂತ. ಅವ್ರು ಒಬ್ಬ ಹೆಣ್ಣ್ ಮಕ್ಕಳ ನಿಜವಾದ ಅಪ್ಪನೇ ಆಗಿದ್ದಿದ್ರೆ ನಮ್ಮನೆಲೆ ಇಂದ್ ಉಳ್ದ್ ನಾಳೆ ನಿಮ್ಮಕ್ಕನ ಊರ್‌ಗೆ ಹೋಕ್‌ತ ಹೇಳಿರುವ್ರೊ. ಆದ್ರೆ ಅವ್ರು ಹಂಗೆ ಮಾಡ್ತ್ಲ.

ಬದಲಿಗೆ ಅಲ್ಲೆ ನಿತ್ತಿದ್ದ ಬೆಳ್ಳಿ ತೇಳಂವಂಗೆ ಹೇಳ್ದೊ. "ಏಯ್ ಬೆಳ್ಳಿ ನೀನು ಹೋಕನ ಈ ಗೂಡೆನ ಕೊಂಗಳ್ಳಿಗೆ ಕಳ್ಸ್‌ತ" ಬೆಳ್ಳಿಗೆ ತುಂಬಾ ಖುಷಿಯಾಗಿ ಗೂಡೆನ ಸ್ವಲ್ಪೊತ್ತ್ ಇಲ್ಲೆ ನಿತ್ತ್‌ಕ ತೇಳಿ, ತಾನ್ ಪಕ್ಕದ ಸಾರಾಯಿ ಅಂಗಡಿಯೊಳಗಿದ್ದ 4 ಜನ ಪೋಲಿ ಹೈದಗಳಿಗೆ, ನಾನ್ ಹೋಗಿ ಸ್ವಲ್ಪೊತ್ತ್ ಕಳ್ದ್ ಬಾಕೆ ಹೇಳಿ ತಾನ್ ಹೊರಟತ್ ಗೂಡೆನ ಕರ್‌ಕಂಡ. ಭವಿಷ್ಯ ಅಂವ ಮೊದ್ಲ ಹಿಂಗೆ ತುಂಬಾ ಸರಿ ನಡೆಸಿರಕೇನೋ. ಇಲ್ಲದಿದ್ರೆ ಹಿಂಗಾಕೆ ಸಾಧ್ಯ ಇಲ್ಲೆ, ಏನೊ ಅಂತೂ ಗೂಡೆ ಇಂವ ಒಬ್ಬನೇ ಇರ್‌ದಲಾತ ಧೈರ್ಯ ಮಾಡಿಕಂಡ್ ಬೆಳ್ಳಿನ ಜೊತೆ ತನ್ನ ಅಕ್ಕನ ಊರಿಗೆ ಹೊರಟತ್.

ಹೋಗ್‌ತ್ತಿದ್ದ ಕುಸುಮಂಗೆ ಏನೋ ಶಬ್ದ ಆಗಿ ಹಿಂದೆ ತಿರ್‌ಗಿನೋಡ್ತ್ ಅಷ್ಟೆ. ಅವ್ಳಗೆ ತಲೆಯೆಲ್ಲಾ ಗಿರ್‌ಕ್ ಹೊಡ್ದಂಗಾತ್. ಬಾಯಿ ತೆಗೆಯಕೆ ಮೊದ್ಲೆ ಹಿಂದೆಂದ ಒಬ್ಬ ಓಡಿಬಂದ್ ಅವ್ಳ ಬಾಯಿಗೆ ಚೌಕ ತುರುಕಿತ್. ಪಿಕ್ಚರ್‌ಲಿ ನಡ್‌ದಂಗೆ ಎಲ್ಲಾ ಒಂದ್ ಸೆಕೆಂಡ್‌ಲೆ ನಡ್ದೋತ್.

ಮತ್ತೆ ಒಬ್ಬಾದ ಮ್ಯಾಲೆ ಒಬ್ಬನಂಗೆ 5 ಜನ ಅವ್ಳ ಸುಕೋಮಲ ಶರೀರನ, ಸತ್ತ ದನಕರ್‌ಗಳ ದೇಹನ ಹದ್ದ್ ಕಾಗೆಗ ಕುಕ್ಕಿ ಕುಕ್ಕಿ ತಿಂಬಂಗೆ ಆ ರಾಕ್ಷಸಿ ಪ್ರವೃತ್ತಿಯ ಕಾಮುಕರ್ ತಮ್ಮ ಕಾಮ ತೃಷೆಂದ ಹಾಳ್ ಮಾಡಿ ಬುಟ್ಟೊ. ಅವ್ಳ ಆ ರಾತ್ರಿ ಯಾರ್ನ ಕರೆಯಕ್ ? ಅದೂ ತನ್ನವುತ ಯಾರು ಇಲ್ಲದ ಆ ಊರ್‌ಲಿ. ಅಂತೂ ಅರ್‌ಳಿ ನೆಗಾಡಿಕಾದ ಹೂನ ಬಾಳ್ ಮೊಗ್‌ಲೇ ಮುರ್‌ಟಿ ಹೋತ್.

5 ಜನ ತಮ್ಮ ಬಯಕೆ ತೀರ್‌ಸಿದ ಮ್ಯಾಲೆ ಮೊದ್ಲ ಕರ್ಕ ಬಂದ ಬೆಳ್ಳಿನೇ ತನ್ನ ಮನೆಗೆ ಕರ್ಕಂಡ್ ಹೋತ್. ಅಲ್ಲಿ ಗೂಡೆ ಅವ್ನ ಹೆಣ್ಣ್‌ನೊಟ್ಟಿಗೆ ಎಲ್ಲಾ ವಿಷಯ ಹೇಳ್ತ್. ಅವ್ಳು ಒಬ್ಬ ಹೆಣ್ಣಾದರ್‌ಂದ ಎಲ್ಲಾ ಕೇಳಿ ಅವ್ಳಗೆ ತುಂಬಾ ಮರುಕವುಂಟಾತ್. ಅವ್ಳು ಇದ್ಕೆ ಏನಾದ್ರು ಮಾಡಕೂತೇಳಿ ತನ್ನ ಗಂಡನೂ ಸೇರಿದ್ದರೂ ಗನ್ನೆ ಮಾಡ್ದೆ ಊರವ್ಕೆಲ್ಲಾ ಹೇಳ್ತ್.

ಊರವು ತಮ್ಮ ಊರ್ ಮರ್‌ವಾದಿ ಹೋದೆತ ಊರವೇ ಒಂದು ತೀರ್ಮಾನ ಮಾಡ್ದೊ. ಅದರ್‌ಲಿ ಒಬೊಬ್ಬ 500 ರೂಪಾಯಿ ಗೂಡೆಗೆ ಕೊಡಕೂತ. ಅಂತೂ ಶೀಲಕ್ಕೆ ಸಿಕ್ಕಿದ್ ಬರೀ 2500 ರೂಪಾಯಿ. ನೋಡ್‌ವರಾ ? ನಮ್ಮ ಹೆಣ್ಣ್‌ಮಕ್ಕ ಇಂದ್ ಶೀಲ ಉಳ್ಸಿ ಕಂಬಕೆ ಎಷ್ಟು ಕಷ್ಟ ಉಟ್ಟ್‌ತ. ಇದಕೆಲ್ಲಾ ಯಾರ್ ಹೊಣೆ ?

**○ ಬೋಳನ ಪ್ರೇಮ, ಮಾಲಂಬಿ,**
ಸೋಮವಾರಪೇಟೆ

---

## ನಗೆಹನಿ

ಯಜಮಾನತಿ : ಏ ರಂಗಪ್ಪ

ಆಳು : ಏನು ಅಮ್ಮಾವರೇ

ಯ : ನೋಡು ನಮ್ಮ ಬಾವಿಲಿ ಒಂದು ಇಲಿ ಬಿದ್ದುಟ್ಟು

ಆ : ಓಡಿ ಹೋಗಿ ಒಂದು ಕೊತ್ತಿನ ಬಾವಿಗೆ ಹಾಕಿತ್

ಯ : ಅಯ್ಯೋಯ್ಯೋ ಇದೇನ್ ಕೊತ್ತಿನ ಬಾವಿಗೆ ಹಾಕಿದಲ್ಲ

ಆ : ಹೆದರ್‌ಬಡಿ ಅಮ್ಮಾವರೇ ಆ ಕೊತ್ತಿ ಹೋಗಿ ಇಲಿನ ಹಿಡ್ದ್ ತಂದದೆ.

**ಬಿರುಮಣ್ಣಾಸ ಪಿ. ವೆಂಕಟರಮಣ**
ಮದೆನಾಡು

K.R.N.N. 240

# ಕೊಡಗು ಸಂಗಾತಿ ಪ್ರಥಮ ವರ್ಷದ ಯುಗಾದಿಯ ವಿಶೇಷಾಂಕ – 1998

ನಂ. 35, "ಸವಿತಾ ನಿಲಯ" ಮೊದಲ ಅಡ್ಡರಸ್ತೆ, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ, ಜಯಲಕ್ಷ್ಮಿಪುರಂ, ಮೈಸೂರು – 570 012

ಕೊಡಗು ಸಂಗಾತಿ ತನ್ನ ಪ್ರಥಮ ವರ್ಷದ ಹುಟ್ಟುಹಬ್ಬದ ಸಂದರ್ಭದಲ್ಲಿ ವಿಶೇಷ ಸಂಚಿಕೆಯನ್ನು ಹೊರತರಲು ಇಚ್ಛಿಸಿದೆ. ಕರ್ನಾಟಕದಾದ್ಯಂತ ಗೌಡ ಜನಾಂಗದ ಮನೆ ಮಾತಾಗಿರುವ, ಓದುಗರ ಮನಸ್ಸನ್ನು ಗೆದ್ದು ತನ್ನ ಸ್ವಂತಿಕೆಯಿಂದ ಮುನ್ನಡೆದಿರುವ 'ಕೊಡಗು ಸಂಗಾತಿ' ಜನಾಂಗದವರ ಜಾಹೀರಾತುಗಳ ಪ್ರಕಟಣೆಗೆ ಉತ್ತಮ ಮಾಧ್ಯಮವಾಗಿದೆ.

'ಕೊಡಗು ಸಂಗಾತಿ' ಹೊರತರುತ್ತಿರುವ ಈ ವಿಶೇಷ ಸಂಚಿಕೆ ಕಥೆ, ಸಾಹಿತ್ಯಿಕ ಲೇಖನ, ವೈಚಾರಿಕ, ಹಾಸ್ಯಲೇಖನ, ವಿಡಂಬನೆಗಳನ್ನೊಳಗೊಂಡಿರುವುದಲ್ಲದೆ, ಹಿರಿಕಿರಿಯರೆಲ್ಲರಿಗೂ ಪ್ರೋತ್ಸಾಹಿಸುತ್ತಿರುವ ಹಾಗೂ ಪ್ರತಿಯೊಬ್ಬ ಗೌಡ ಜನಾಂಗದಲ್ಲಿಯೂ ಶಾಶ್ವತವಾಗಿ ಉಳಿಯುವ ಪತ್ರಿಕೆ ಇದಾಗಿದೆ.

1998ರ ಏಪ್ರಿಲ್ ದ್ವಿತೀಯ ವಾರದಲ್ಲಿ ಸುಂದರ ಮುದ್ರಣದೊಂದಿಗೆ ಕ್ರೌನ್ ಆಕಾರದಲ್ಲಿ ಹೊರಬರುವ ಈ ಸಂಚಿಕೆಗೆ ತಮ್ಮ ಸಂಸ್ಥೆಯ ಹಾಗೂ ವೈಯಕ್ತಿಕವಾದ ಶುಭಾಶಯ/ಜಾಹೀರಾತುಗಳನ್ನು ನೀಡಿ ಕೊಡಗು ಸಂಗಾತಿ ಪತ್ರಿಕೆಯು ಬೆಳೆಯಲು ಪ್ರೋತ್ಸಾಹಿಸಬೇಕಾಗಿ ನಮ್ಮ ನಮ್ರ ಮನವಿ.

| ಜಾಹೀರಾತಿನ ವಿವರ : | | ಚಂದಾ ವಿವರ | |
|---|---|---|---|
| ಕೊನೆ ಹೊರ ಪುಟಕ್ಕೆ | - 3000 | 1 ವರ್ಷಕ್ಕೆ | - 120 |
| ಒಳ ಒಂದು ಪುಟಕ್ಕೆ | - 2000 | ಹಿತೈಷಿ | - 2500 |
| ಅರ್ಧ ಪುಟಕ್ಕೆ | - 1000 | ಪೋಷಕ | - 5000 |
| ಕಾಲು ಪುಟಕ್ಕೆ | - 500 | ಮಹಾಪೋಷಕ | - 10000 |

[ವಿ. ಸೂ. :ಲೇಖನಗಳನ್ನು ಮತ್ತು ಜಾಹೀರಾತುಗಳನ್ನು ಕಳುಹಿಸುವವರು ವಿಶೇಷ ಸಂಚಿಕೆಗೆ ಎಂದು ಬರೆಯತಕ್ಕದ್ದು]

[ಲೇಖನಗಳನ್ನು/ಜಾಹೀರಾತುಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ 28-2-1998]

ವಂದನೆಗಳೊಂದಿಗೆ, –ಸಂಪಾದಕಿ

Printed by M K Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore-21 Published at Mysore, Editor PATTADA. P. SHEELAMANI, No. 35, 1st Cross, 4th Block (Near Divisional Telephone Office) Jayalakshmipuram, Mysore-570 012 Phone ; 516771